ಮೈಸೂರಿನ ದಿವಾನರಾಗಿದ್ದ

ಶೆಟ್ಟಿಪುಣ್ಯಂ ವೀರವಳ್ಳಿ

# ರಂಗಾಚಾರ್ಲು, ಸಿ. ಐ. ಇ.

ಅವರ ಜೀವನ ಚರಿತ್ರೆ, ಆಗಿನ ಸ್ಥಿತಿಗತಿಗಳು

---

ಡಿ. ವಿ. ಗುಂಡಪ್ಪನವರಿಂದ

---

ಮ|| ಯಂ. ವೆಂಕಟಕೃಷ್ಣಯ್ಯನವರೂ

ರಾಯ್ ಬಹದ್ದೂರ್

ಮ|| ಅಂಬಿಲ್ ನರಸಿಂಹಯ್ಯಂಗಾರ್ಯರೂ

ಬರೆದಿರುವ ಪೀಠಿಕೆಗಳೊಡನೆ

ನಾಲ್ಕನೆಯ ಆವೃತ್ತಿ

ಕರ್ಣಾಟಕ ಪ್ರಕಟನಾಲಯ

ಬಸವನಗುಡಿ, ಬೆಂಗಳೂರು ಸಿಟಿ

## ಈ ಲೇಖಕರ ಇತರ ಗ್ರಂಥಗಳು

---

ಜೀವನ ಚರಿತ್ರೆಗಳು :

ಗೋಪಾಲಕೃಷ್ಣ ಗೋಖಲೆ

ವಿದ್ಯಾರಣ್ಯರ ಚರಿತ್ರೆ

ವಿದ್ಯಾರಣ್ಯರ ಸಮಕಾಲೀನರು

ಕವಿತೆಗಳು :

ವಸಂತ ಕುಸುಮಾಂಜಲಿ

ನಿವೇದನ

ನಾಟಕಗಳು :

ವಿದ್ಯಾರಣ್ಯ ವಿಜಯ

ತಿಲೋತ್ತಮೆ

ಕನಕಾಲುಕಾ

ಮೊದಲಾದುವು.

# ವಿಜ್ಞಾಪನೆ

## ಪ್ರಥಮ ಮುದ್ರಣ

ಬುದ್ಧಿಶಕ್ತಿಯಿಂದಲೂ ಗುಣಾತಿಶಯದಿಂದಲೂ ಪ್ರಖ್ಯಾತರಾದ ಮಹಾಪುರುಷರ ಜೀವನ ಚರಿತ್ರೆಗಳು ಕರ್ಣಾಟಕ ಭಾಷೆಯಲ್ಲಿ ವಿರಳ ವಾಗಿವೆ. ಅದರಲ್ಲಿಯೂ ರಾಜ್ಯಭಾರ ನಿರ್ವಹಣದಲ್ಲಿ ಹೆಸರುಗೊಂಡವರ ಚರಿತ್ರೆಗಳು ಅತಿವಿರಳ. ಈ ಸಣ್ಣ ಪುಸ್ತಕವು ಆ ಕೊರತೆಯನ್ನು ಹೋಗಲಾಡಿಸಲು ಮಾಡಿದ ಒಂದು ಅಲ್ಪ ಪ್ರಯತ್ನದ ಫಲವಾಗಿದೆ.

ಇಂತಹ ಪುಸ್ತಕಗಳನ್ನು ಬರೆಯಲು ನಮ್ಮ ದೇಶದಲ್ಲಿ ಅನು ಕೂಲಗಳು ಸಾಲವು. ಕಥಾನಾಯಕರಿಗೆ ಸಂಬಂಧಪಟ್ಟ ಸಮಾಚಾರ ಗಳನ್ನು ಸಂಪಾದಿಸುವುದು ಬಹು ಕಷ್ಟದ ಕೆಲಸವಾಗಿದೆ. ಅವರ ವಂಶೀಯರಿದ್ದರೂ, ಅವರು ತಮ್ಮ ಹಿರಿಯರ ವಿಷಯವನ್ನು ಧಾರಾಳ ವಾಗಿ ಇತರರಿಗೆ ತಿಳಿಸುವುದಿಲ್ಲ. ಅವರ ಇಷ್ಟಮಿತ್ರರಿದ್ದರೂ, ಬಗೆ ಬಗೆಯ ಕಾರಣಗಳಿಂದ ಅವರು ಆ ಮಹನೀಯರನ್ನು ಕುರಿತು ಉಪನ್ಯಾಸಗಳಲ್ಲಿಯೂ ವರ್ತಮಾನಪತ್ರಿಕೆಗಳಲ್ಲಿಯೂ ಪ್ರಶಂಸಿಸುವ ಪದ್ಧತಿಯಿಲ್ಲ. ಹೀಗಿರುವುದರಿಂದ ಜೀವನ ಚರಿತ್ರೆಗೆ ಬೇಕಾದ ಎಲ್ಲ ವಿಷಯಗಳನ್ನೂ ಸಂಗ್ರಹಿಸುವುದು ಅಸಾಧ್ಯವೆಂದೇ ಹೇಳಬೇಕಾಗಿರು ವಲ್ಲಿ, ಈ ಸಣ್ಣ ಗ್ರಂಥವು ಎಲ್ಲ ಭಾಗಗಳಲ್ಲಿಯೂ ಸಂಪೂರ್ಣವಾಗಿದೆ ಎಂದು ಹೇಗೆತಾನೆ ತಿಳಿಯಲಾದೀತು? ಈಗಲಾದರೂ ರಂಗಾಚಾರ್ಯ ರವರನ್ನು ತಿಳಿದವರು ತಮಗೆ ಅವರ ವಿಷಯವಾಗಿ ಗೊತ್ತಿರುವ ಅಂಶಗಳನ್ನು ಪ್ರಪಂಚಕ್ಕೆ ತಿಳಿಯಪಡಿಸಬೇಕೆಂದು ಈ ಮೂಲಕ ಪ್ರಾರ್ಥಿಸುವೆನು.

ರಂಗಾಚಾರ್ಯರ ಗುಣಾವಗುಣಗಳನ್ನು ಹೆಚ್ಚು ಕಡಿಮೆ ಗಳೇನೂ ಇಲ್ಲದಂತೆ ವಿಮರ್ಶಿಸುವುದು ಈಗ ಸುಲಭವಲ್ಲ. ಅವರ ಮಿತ್ರರೂ ಶತ್ರುಗಳೂ ಅನೇಕರು ಇನ್ನೂ ಬದುಕಿರುವರು. ಅವರು

ಜೀವಿಸಿದ್ದಾಗ ಅವರಲ್ಲಿ ಜನರಿಗಿದ್ದ ಅಸೂಯಾಭಿಮಾನಗಳು ಇನ್ನೂ ಕೊಂಚ ಮಟ್ಟಿಗೆ ಹಾಗೆಯೇ ಇರುವುವು. ಅವರ ಕಾಲದಲ್ಲಿ ಚರ್ಚೆಯಲ್ಲಿದ್ದ ಅಂಶಗಳು ಅನೇಕ ಇನ್ನೂ ಚರ್ಚಾಸ್ಪದವಾಗಿಯೇ ಇರುವುವು. ಅವರು ಪ್ರಾರಂಭಿಸಿದ ಕಾರ್ಯಗಳಲ್ಲಿ ಕೆಲವು ಭಾಗವಿನ್ನೂ ಫಲಕ್ಕೆ ಬಂದಿಲ್ಲ; ಮತ್ತೆ ಕೆಲವು ಭಾಗವನ್ನು ಈಚಿನವರು ಯಥೋಚಿತವಾಗಿ ನಡೆಯಿಸಿಲ್ಲ. ಹೀಗಿರಲಾಗಿ, ಕೆಲವು ವಿಷಯಗಳಲ್ಲಿ ಅವರ ಯೋಗ್ಯತೆಯು ಇಷ್ಟೇ ಸರಿ ಎಂದು ನಿರ್ಧರಿಸುವುದು ಸಾಧ್ಯವಲ್ಲ; ಇನ್ನು ಕೆಲವು ವಿಷಯಗಳಲ್ಲಿ ಅವರ ಯೋಗ್ಯತೆಯನ್ನು ನಿಷ್ಕರ್ಷೆ ಮಾಡಹೊರಟರೆ ಅದರಿಂದ ಅವರಲ್ಲಿ ಮಮತೆಯುಳ್ಳವರಿಗೋ ಅಥವಾ ಮಾತ್ಸರ್ಯವುಳ್ಳವರಿಗೋ ಅಸಮಾಧಾನವಾಗದೆ ಇರದು. ಆದರೂ, ಈ ಬಗೆಯ ಮಮತಾ ಮಾತ್ಸರ್ಯಗಳುಳ್ಳವರಿಲ್ಲದೆ ಹೋಗಿ, ಯೋಗ್ಯತಾ ಪರೀಕ್ಷೆಗೆ ತಕ್ಕ ಕಾಲವು ಬರುವವರೆಗೂ ಜೀವನ ಚರಿತ್ರೆಯನ್ನೇ ಬರೆಯದೆ ಬಿಟ್ಟರೆ, ಅದರಿಂದಲೂ ಬಹು ನಷ್ಟಗಳುಂಟು. ಕಾಲವಿಳಂಬವಾದ ಹಾಗೆಲ್ಲಾ ಜನರಿಗೆ ಅವರ ಹೆಸರು ಮರೆತುಹೋಗುವುದು; ಅವರು ಮಾಡಿದ ಕೆಲಸದಲ್ಲಿ ಆಸಕ್ತಿಯು ಕಡಿಮೆಯಾಗುವುದು; ಅವರಿಗಿದ್ದ ಅನುಕೂಲ ಪ್ರತಿಕೂಲಗಳ ನಿಜಸ್ವರೂಪವು ತಿಳಿಯದೆ ಹೋಗುವುದು; ಅವರ ಮತ್ತು ಅವರ ಸಮಕಾಲಿಕರ ಅನುಭವಾಭಿಪ್ರಾಯಗಳು ಅಸ್ಪಷ್ಟವಾಗುವುವು; ಹಾಗೆಯೇ ಅವರ ಜೀವನ ಕಥೆಯಿಂದ ತೋರಿಬರುವ ನೀತಿಗಳು ಗಣನೆಗೆ ಬಾರದೆ ಹೋಗುವುವು; ಈ ರೀತಿ ಜೀವನ ಚರಿತ್ರೆಯನ್ನು ಬರೆಯುವುದರ ಮುಖ್ಯೋದ್ದೇಶವೇ ನೆರವೇರದೆ ಹೋಗುವುದು. ಇದನ್ನೆಲ್ಲ ನೋಡಿದರೆ, ಈ ಚರಿತ್ರೆಯನ್ನೀಗಲೇ ಬರೆಯಬಾರದಾಗಿತ್ತೆಂದು ಯಾರೂ ಹೇಳಲಾರರು. ಈ ಕೆಲಸವನ್ನು ಮಾಡುವುದರಲ್ಲಿ ನಾನು ದುರಭಿಮಾನಕ್ಕೆಡೆಗುಡದೆ, ರಂಗಾಚಾರ್ಯರ ಸಮಕಾಲಿಕರಿಗೆ ತಕ್ಕಂತೆ ಗೌರವವನ್ನು ತೋರಬೇಕೆಂದು ಮನಃಪೂರ್ವಕವಾಗಿ ಪ್ರಯತ್ನಿಸಿರುವೆನು.

ಈ ಬಗೆಯ ಬರೆವಣಿಗೆಯಲ್ಲಿ ಅನ್ಯ ಭಾಷಾ ಪದಗಳ ಉಪಯೋಗವು ಅನಿವಾರ್ಯವೇ ಸರಿ. ಇದು ರೈತರು, ವರ್ತಕರು ಮೊದಲಾದ

ಸಮಸ್ತ ಜನರಿಗೂ ಸುಲಭವಾಗಿ ತಿಳಿವಳಿಕೆಗೆ ಬರಬೇಕೆಂಬ ಅಭಿಪ್ರಾಯದಿಂದ ಇದನ್ನು ಬಳಕೆಯಲ್ಲಿರುವ ಮಾತುಗಳಿಂದ ಅತಿ ಸಾಮಾನ್ಯವಾದ ಶೈಲಿಯಲ್ಲಿ ಬರೆಯಲು ಪ್ರಯತ್ನಿಸಿರುವೆನು. ಅಲ್ಲಲ್ಲಿ ದೋಷಗಳಿದ್ದಾವು. ಅಕ್ಷರ ಸ್ಖಾಲಿತ್ಯಗಳೂ ಇರಬಹುದು. ಅವುಗಳಿಗಾಗಿ ವಾಚಕ ಮಹಾಶಯರ ಮನ್ನಣೆಯನ್ನು ಬೇಡುತ್ತಿರುವೆನು.

* * * *

ಮೈಸೂರಿನ ಮಹಾಜನರಲ್ಲಿ ಸುಪ್ರಸಿದ್ಧ ದೇಶಾಭಿಮಾನಿಗಳೂ ರಂಗಾಚಾರ್ಯರನ್ನು ಚೆನ್ನಾಗಿ ಬಲ್ಲವರೂ ಆದ (ಮರಿಮಲ್ಲಪ್ಪನವರ ಹೈಸ್ಕೂಲಿನ ಹೆಡ್‌ಮಾಸ್ಟರಾಗಿದ್ದ) ಮ|| ಎಂ. ವೆಂಕಟಕೃಷ್ಣಯ್ಯನವರು ದಯಪಿಟ್ಟು, ತಮಗಿರುವ ಅನೇಕ ಕಾರ್ಯಗಳ ಮಧ್ಯದಲ್ಲಿ ವಿರಾಮ ಮಾಡಿಕೊಂಡು, ಈ ಪುಸ್ತಕಕ್ಕೆ ಪೀಠಿಕೆಯನ್ನು ಬರೆದು ಕೊಟ್ಟಿರುವುದಕ್ಕಾಗಿ ಅತ್ಯಂತ ಕೃತಜ್ಞನಾಗಿರುವೆನು.

ಮತ್ತೊಂದು ಪೀಠಿಕೆಯನ್ನು (ಈಚೆಗೆ ದಿವಂಗತರಾದ) ಅಂಬಿಲ್ ನರಸಿಂಹಯ್ಯಂಗಾರ್ಯರಿಂದ ಬರೆಯಿಸಬೇಕೆಂದು ಸಲಹೆಕೊಟ್ಟವರು (ಗತಿಸಿದ) ಪ್ರಧಾನಶಿರೋಮಣಿ ಟಿ. ಆನಂದರಾವ್, ಸಿ.ಐ.ಇ., ಅವರು. [ಮ|| ಆನಂದರಾಯರವರು ಈ ಪುಸ್ತಕವನ್ನು ಪ್ರಕಟವಾಗುವುದಕ್ಕೆ ಮುಂಚೆಯೇ ಪರಾಮರ್ಶಿಸಿದ್ದು, ಪ್ರಕಟವಾದಮೇಲೆ ಬಹು ಪ್ರತಿಗಳನ್ನು ತೆಗೆದುಕೊಂಡು ಇಷ್ಟಮಿತ್ರರಿಗೆ ಹಂಚಿ ಪ್ರೋತ್ಸಾಹಿಸಿದರು.]

* * * *

ಜೂನ್ ೧೯೧೧

---

## ದ್ವಿತೀಯ ಮುದ್ರಣ

ಈ ಪುಸ್ತಕವನ್ನು ಮೊದಲು ಬರೆದುದು ಹನ್ನೊಂದು ವರ್ಷಗಳ ಹಿಂದೆ. ಅದನ್ನು ಬರೆದ ಒಂದು ವರ್ಷದಮೇಲೆ ಇಂಗ್ಲಿಷ್ ಭಾಷೆಯಲ್ಲಿಯೂ ರಂಗಾಚಾರ್ಯರ ವೃತ್ತಾಂತವನ್ನು ಸಂಕ್ಷೇಪವಾಗಿ ಬರೆದೆನು. ಅಲ್ಲಿಂದೀಚೆಗೆ ನಮ್ಮ ಕಥಾನಾಯಕರ ಕಾಗದಪತ್ರಗಳೂ ಪುಸ್ತಕಗಳೂ ಅನೇಕ ದೊರೆತಿವೆ. ಅವುಗಳನ್ನೀ ಪುನರ್ಮುದ್ರಣದ ಸಂದ

ರ್ಭದಲ್ಲಿ ಉಪಯೋಗಿಸಿರುವೆನು. ಅದರಿಂದ ಗ್ರಂಥವು ದೊಡ್ಡದಾಗಿದೆ. ಹೊಸದಾಗಿ ಸೇರಿಸಲ್ಪಟ್ಟಿರುವ ಅಂಶಗಳು ಅಮುಖ್ಯವಾದುವಲ್ಲವೆಂದು ನಂಬಿರುವೆನು. ಅವುಗಳನ್ನು ಕೊಟ್ಟು ಉಪಕರಿಸಿದ ರಂಗಾಚಾರ್ಯರವರ ಸಹಧರ್ಮಿಣಿಯಾದ ಮಾತೃಶ್ರೀ ಸಮಾನರಾದ ಅಮ್ಮಾಳಮ್ಮನವರಿಗೂ, ಅವರ ದೌಹಿತ್ರರಾದ ಮ|| ಸಿ. ಚಕ್ರವರ್ತಿ, ಬಿ.ಎ., ಎಲ್‌ಎಲ್.ಬಿ. ಯವರಿಗೂ ನನ್ನ ಮನಃಪೂರ್ವಕವಾದ ಧನ್ಯವಾದಗಳನ್ನು ಸಂತೋಷ ದಿಂದ ಸಮರ್ಪಿಸುತ್ತಿರುವೆನು. ವಾಚಕ ಮಹಾಶಯರೂ ಸಹ ಅವರ ಉಪಕಾರದ ಬೆಲೆಯನ್ನರಿತು ಅವರನ್ನು ವಂದಿಸುವರೆಂದು ನಿರೀಕ್ಷಿಸಿದ್ದೇನೆ.

ಈ ದ್ವಿತೀಯ ಮುದ್ರಣಕ್ಕೆ ಅವಕಾಶವನ್ನು ಕಲ್ಪಿಸಿದವರು ನಮ್ಮ ವಿದ್ಯಾ ಪ್ರಚಾರದ ಇಲಾಖೆಯ ಅಧಿಕಾರಿಗಳು ; ಮೈಸೂರು ಮಹಾ ಜನರಲ್ಲವೆಂದು ಹೇಳಿಕೊಳ್ಳಲು ಸಂಕೋಚವಾಗುತ್ತದೆಯಾದರೂ, ಅದನ್ನು ಹೇಳದಿದ್ದರೆ ನಮ್ಮವರ ದೇಶಾಭಿಮಾನವೆಂತಹುದೆಂಬುದನ್ನು ಬಚ್ಚಿಟ್ಟಂತಾಗುವುದು. ಮೊದಲು ಅಚ್ಚು ಮಾಡಿದ ಒಂದು ಸಾವಿರ ಪ್ರತಿಗಳಲ್ಲಿ ಧರ್ಮಾರ್ಥವಾಗಿ ಕೊಟ್ಟ ಇನ್ನೂರು ಪ್ರತಿಗಳೂ, ಕೈಯಲ್ಲಿ ನಿಂತಿರುವ ಮುನ್ನೂರು ಅಥವಾ ಮುನ್ನೂರೈವತ್ತು ಪ್ರತಿಗಳೂ ಹೋಗ ಲಾಗಿ, ಉಳಿದ ನಾನೂರೈವತ್ತು ಅಥವಾ ಐನೂರು ಪ್ರತಿಗಳು ವಿಕ್ರಯ ವಾಗಲು ಹತ್ತು ವರ್ಷಗಳಾಗಿವೆ. ಅರುವತ್ತು ಲಕ್ಷ ಪ್ರಜೆಯುಳ್ಳ ಈ "ಮಾದರಿಯ ಸಂಸ್ಥಾನ"ದಲ್ಲಿ ರಾಜ್ಯೋದ್ಧಾರಕರಾದವರ ಚರಿತ್ರೆಗೆ ದೊರೆಯುವ ಆದರಣೆಯು ಇಂತಹುದಾಗಿರುವಲ್ಲಿ, ದೇಶಾಭಿವೃದ್ಧಿ ಭಾಷಾಭಿವೃದ್ಧಿಗಳನ್ನು ಬಯಸಿ ದುಡಿಯುತ್ತಿರುವವರ ಮನಸ್ಸಿಗೆ ಒಂದೊಂದು ವೇಳೆಯಾದರೂ ತಾವು ಸ್ವಪ್ನಪ್ರಪಂಚದಲ್ಲಿ ಭ್ರಾಂತಿಪಡು ತ್ತಿರುವ ಜನರೆಂದು ತೋರಿದರೆ ಅದರಲ್ಲಿ ಆಶ್ಚರ್ಯವೇನು? ನಮ್ಮ ದೇಶದಲ್ಲಿ ಈಗ ವಿದ್ಯಾ ಪ್ರಾಚುರ್ಯವೂ ಸಾರ್ವಜನಿಕ ವಿಷಯೋತ್ಸಾ ಹವೂ ಹೆಚ್ಚುತ್ತಿವೆಯೆಂದು ಎಲ್ಲರೂ ಹೇಳುತ್ತಾರೆ. ಅದು ನಿಜವಾದರೆ, ನಮ್ಮ ಮಹಾಜನರು ಗ್ರಂಥ ರಚನೆಗೆ ಕೊಡುವ ಪ್ರೋತ್ಸಾಹದಲ್ಲಿ ಅವರ ಹೊಸ ಸಂಭ್ರಮಕ್ಕೆ ಮುಖ್ಯ ನಿದರ್ಶನವು ಉಂಟಾಗಲಿ ಎಂದು

ಹಾರೈಸುತ್ತೇನೆ. ಸದ್ಯಃ, ಬಹುದಿನಗಳ ಕೆಳಗೆ ಬರೆದ ಪುಸ್ತಕವನ್ನು ತಿದ್ದಿ ಸಾಧ್ಯವಾದ ಮಟ್ಟಿಗೆ ಸಮಗ್ರವಾಗಿ ಮಾಡುವುದಕ್ಕೆ ಅವಕಾಶ ವನ್ನೇರ್ಪಡಿಸಿ, ರಂಗಾಚಾರ್ಯರ ಸದುಪದೇಶಗಳೂ ಸದ್ವೃತ್ತಿಯೂ ದೇಶದ ಪುರೋಭಿವೃದ್ಧಿಗೆ ಆಧಾರಭೂತರಾದ ಬಾಲಕರ ತಿಳಿವಳಿಕೆಗೆ ಬರಲಾಗುವಂತೆ ಪುಸ್ತಕವನ್ನು ಹೈಸ್ಕೂಲುಗಳ ಪಠ್ಯಪುಸ್ತಕವಾಗಿ ಗೊತ್ತುಮಾಡಿರುವುದಕ್ಕಾಗಿ, ವಿದ್ಯಾಭ್ಯಾಸದ ಇಲಾಖೆಯ ಯಜಮಾನರಿಗೆ ನನ್ನ ಅತ್ಯಂತ ವಿನಯಪೂರ್ವಕವಾದ ಕೃತಜ್ಞತೆಯನ್ನು ಸಮರ್ಪಿಸುತ್ತೇನೆ.

ಬರವಣಿಗೆಯಲ್ಲಿರಬಹುದಾದ ಮತ್ತು ಇತರವಾದ ತಪ್ಪುಗಳನ್ನು ವಾಚಕರು ದಯವಿಟ್ಟು ತಿದ್ದಿಕೊಡಬೇಕೆಂದು ಪುನಃ ಕೇಳಿಕೊಳ್ಳುತ್ತೇನೆ.

ಜೂನ್ ೧೯೨೦

---

## ತೃತೀಯ ಮುದ್ರಣ

ಈ ತೃತೀಯ ಮುದ್ರಣಾವಕಾಶದಲ್ಲಿ ಗ್ರಂಥವನ್ನೆಲ್ಲ ಪುನಃ ಶೋಧಿಸಿ, ಅನೇಕ ವಾಕ್ಯಗಳನ್ನು ತಿದ್ದಿ, ಒಂದೆರಡು ಸಣ್ಣ ಭಾಗಗಳನ್ನು ಹೊಸದಾಗಿ ಸೇರಿಸಿ, ಅರ್ಥವು ಹೆಚ್ಚು ವಿಶದವಾಗುವಂತೆ ಮಾಡಿದೆ.

ಆದರೆ ಗ್ರಂಥವು ಈಗ ಸಂಪೂರ್ಣ ನಿರ್ದೋಷವಾಗಿದೆಯೆಂದು ಮಾತ್ರ ಹೇಳಲಾರೆ. ಅಕ್ಷರ ಸ್ಖಾಲಿತ್ಯಗಳೂ ಪ್ರಮಾದದಿಂದ ಬಿದ್ದ ಬಳಕೆಯ ಅಪಪ್ರಯೋಗಗಳೂ ಇನ್ನೂ ಉಳಿದಿರಬಹುದು. ಅವುಗಳನ್ನು ದಯೆಯಿಂದ ತೋರಿಸಿಕೊಡುವವರಿಗೆ ವಂದನೆಗಳು.

ಎರಡನೆಯ ಮುದ್ರಣದ ವಿಜ್ಞಾಪನೆಯಲ್ಲಿ ವಿದ್ಯಾಭ್ಯಾಸದ ಇಲಾಖೆಯವರಿಗೆ ಸಮರ್ಪಿಸಿದ ಕೃತಜ್ಞತಾಪೂರ್ವಕ ವಂದನೆಗಳನ್ನು ಈಗ ಪುನಃ ಅವರಿಗೆ ಸಲ್ಲಿಸಬೇಕಾಗಿದೆ. ರಂಗಾಚಾರ್ಯರ ಜೀವಿತ ಕಾರ್ಯದ ಮುಖ್ಯ ತತ್ತ್ವವು ನಮ್ಮ ದೇಶದ ತರುಣ ತರುಣಿಯರ ಗಮನಕ್ಕೆ ಹೆಚ್ಚು ಹೆಚ್ಚಾಗಿ ಬಂದಹಾಗೆಲ್ಲ ದೇಶಾಭ್ಯುದಯದ ತಳಹದಿಯು ಬಲಪಡುವುದೆಂದು ನನ್ನ ನಂಬಿಕೆ.

ಈ ಗ್ರಂಥದ ಕಡೆಯಲ್ಲಿ ಉದಾಹರಿಸಿರುವ ಹಿಂದಿನ ದೊರೆಗಳ ವಾಕ್ಯಗಳನ್ನು ಮ॥ ಎಂ. ಶಿಂಗ್ರಯ್ಯನವರ "ಶ್ರೀ ಚಾಮರಾಜೇಂದ್ರ ಒಡೆಯರವರ ಚರಿತ್ರೆ"ಯಿಂದ ತೆಗೆದುಕೊಂಡಿದೆ. ಆ ಮಹಾರಾಜರವರ ಬಾಲ್ಯದಶೆ, ವಿದ್ಯಾಭ್ಯಾಸ ಮುಂತಾದ ಆ ಕಾಲದ ಮುಖ್ಯ ಸಂಗತಿಗಳು ಕೆಲವು ಮ॥ ಶಿಂಗ್ರಯ್ಯನವರ ಪುಸ್ತಕದಲ್ಲಿ ವಿಶೇಷವಾಗಿ ವರ್ಣಿಸಲ್ಪಟ್ಟಿವೆ.

ರಂಗಾಚಾರ್ಯರ (ಇಂಗ್ಲಿಷ್) ಕಾಗದಪತ್ರಗಳು ರಾಜ್ಯ ಚರಿತ್ರೆಗೆ ಮುಖ್ಯವಾದುವು ಅನೇಕ ಪ್ರಕಟವಾಗದೆ ಬಿದ್ದಿವೆ. ನಮ್ಮ ಜನರಲ್ಲಿ ದೇಶಾಭಿಮಾನವು ತಕ್ಕಷ್ಟು ಉಂಟಾದಾಗ ಬಹುಶಃ ಅವುಗಳ ಪ್ರಕಟನೆಗೆ ಅವಕಾಶ ಬಂದೀತು. ಈಗ ಈ ಪುಸ್ತಕದಲ್ಲಿ ಉದಾಹರಿಸಲ್ಪಟ್ಟಿರುವ ಕೆಲವು ಲೇಖನಗಳು "ಕರ್ಣಾಟಕ"ವೆಂಬ ಇಂಗ್ಲಿಷ್ ಪತ್ರಿಕೆಯಲ್ಲಿ ಆಗಾಗ ಮುದ್ರಿತವಾಗಿದ್ದುವು.

ಮೇ ೧೯೨೮

---

## ನಾಲ್ಕನೆಯ ಆವೃತ್ತಿ

ಈ ನಾಲ್ಕನೆಯ ಆವೃತ್ತಿಯು ಗ್ರಂಥದ ಶರೀರ ಭಾಗದಲ್ಲಿ ಮೂರನೆಯ ಮುದ್ರಣದ ಪಡಿಯಚ್ಚೇ ಆಗಿದೆ. ಇದರಲ್ಲಿಯ ವಿಶೇಷಾಂಶವು ಉಪಕಥೆಗಳನ್ನೊಳಗೊಂಡ ಪರಿಶಿಷ್ಟ. ಈ ಉಪಕಥೆಗಳು ವಾಚಕರಿಗೆ ಇಷ್ಟವಾದಾವೆಂದು ನಂಬಿದ್ದೇನೆ.

ಜೂನ್ ೧೯೨೮ **ಡಿ. ವಿ. ಜಿ.**

---

# ವಿಷಯಾನುಕ್ರಮಣಿಕೆ

---

## ತಿದ್ದುಪಾಟು

೪೫ನೆಯ ಪುಟದ ಮೊದಲನೆಯ ಪಂಕ್ತಿಯಲ್ಲಿ " ಪಾಲಕ ಪುತ್ರ " ಎಂಬುದಕ್ಕೆ ಬದಲಾಗಿ " ಸ್ವೀಕೃತ ಪುತ್ರ " ಎಂದು ಇಟ್ಟುಕೊಳ್ಳುವುದು ಉತ್ತಮ.

## ಪೀಠಿಕೆ (೧)

ಮ|| ಸಿ. ರಂಗಾಚಾರ್ಯರ ಚರಿತ್ರೆಗೆ ಒಂದು ಪೀಠಿಕೆಯನ್ನು ಬರೆಯಬೇಕೆಂದು ಗ್ರಂಥ ಲೇಖಕರು ನನ್ನನ್ನು ಅಪೇಕ್ಷಿಸಿರುವರು. ಆ ಕೆಲಸವನ್ನು ನಾನು ಸಂತೋಷದಿಂದ ಮಾಡುವೆನು. ಭಾರತೀಯ ಸಚಿವರಲ್ಲಿ ಮ|| ರಂಗಾಚಾರ್ಯರು ಅಗ್ರಗಣ್ಯರು. ೧೮೬೮ನೆಯ ಇಸವಿಯಲ್ಲಿ, ಆಳಿದ ಮಹಾಸ್ವಾಮಿಯವರಾದ ಶ್ರೀ ಮುಮ್ಮಡಿ ಕೃಷ್ಣ ರಾಜ ಒಡೆಯರವರು ಸ್ವರ್ಗಸ್ಥರಾದರು. ಆಗ ಅರಮನೆಯ ಆಡಳಿತಗಳು ಬಹಳ ಗಲಭೆಯಲ್ಲಿದ್ದುವು. ಶ್ರೀ ಚಾಮರಾಜೇಂದ್ರ ಒಡೆಯರವರು 'ಮೈನರ್' ಆಗಿದ್ದರು. ಕರ್ನಲ್ ಮ್ಯಾಲಿಸನ್‌ರೇ ಮೊದಲಾದವರು 'ಗಾರ್ಡಿಯನ್'ರಾಗಿದ್ದರು. 'ರಾಯಲ್ ಸ್ಕೂಲ್' ಎಂಬುದಾಗಿ ಒಂದು ಪಾಠಶಾಲೆಯನ್ನು ನಿರ್ಮಿಸಿ ಶ್ರೀಮನ್ಮಹಾರಾಜರವರ ವಿದ್ಯಾ ಭ್ಯಾಸಕ್ಕೆ ಏರ್ಪಾಡು ಮಾಡಿದ್ದರು. ಶ್ರೀಮನ್ಮಹಾರಾಜರವರು ರಾಜ್ಯ ತಂತ್ರಜ್ಞರಾಗಿಯೂ ಪ್ರಜಾರಂಜನೈಕಪರಾಯಣರಾಗಿಯೂ ಆಗುವು ದಕ್ಕೆ ಅನಿರ್ವಚನೀಯವಾದ ಪ್ರತಿಬಂಧಕಗಳು ಅನೇಕವಾಗಿದ್ದುವು. ಈ ಪ್ರತಿಬಂಧಕಗಳ ಸ್ವಭಾವವನ್ನು ಆಂಗ್ಲೇಯರಾದ 'ಗಾರ್ಡಿಯನ್' ಮತ್ತು 'ಟ್ಯೂಟರು'ಗಳು ತಿಳಿಯುವುದಕ್ಕೆ ಅವಕಾಶವಿರಲಿಲ್ಲ. ಗೋಮುಖವ್ಯಾಘ್ರರಾದ ಜನಗಳು ಅನೇಕರಿದ್ದರು. ಬಾಲ್ಯದಲ್ಲಿ ಮನಸ್ಸು ಜೇನು ಮೇಣದಂತೆ ಇರುವುದು. ಆ ಕಾಲದಲ್ಲಿ ಪಾಠ ಹೇಳತಕ್ಕವರೂ, ಸಹವಾಸದಲ್ಲಿರತಕ್ಕವರೂ ಜ್ಞಾನಶಾಲಿಗಳಾಗಿಯೂ, ವ್ಯವಹಾರಜ್ಞರಾಗಿಯೂ, ಗುಣೈಕ ಪಕ್ಷಪಾತಿಗಳಾಗಿಯೂ, ದುರ್ಮಾರ್ಗ ಪ್ರವರ್ತನೆಯ ವಿಷಯದಲ್ಲಿ ಪರಾಙ್ಮುಖರಾಗಿಯೂ ಇದ್ದರೆ, ಅಂಥಾ ಗುರುಗಳನ್ನೂ ಸಹವಾಸವನ್ನೂ ಪಡೆದವರ ಮನೋ ಭಾವವು ದಿನೇ ದಿನೇ ಸತ್ವಗುಣ ಪ್ರಧಾನವಾಗಿ ಪರಿಣಮಿಸುವುದು. ಈ ಕಾರಣಗಳಿಂದ, ಮ|| ರಂಗಾಚಾರ್ಯರು ಅರಮನೆಯ 'ಕಂಟ್ರೋ ಲರ್' ಆಗಿ ದಯಮಾಡಿಸಿದ ಕೆಲವು ದಿವಸಗಳೊಳಗಾಗಿ,—ಅರಮನೆಯ

ಆಡಳಿತಗಳಲ್ಲಿದ್ದ ನ್ಯೂನಾತಿರಿಕ್ತಗಳನ್ನು ಪರಿಹಾರಮಾಡಿ, ಕ್ರಮ ಪಡಿಸಿದ ತರುವಾಯ,—ಶ್ರೀಮನ್ಮಹಾರಾಜರವರನ್ನು ಭರತಖಂಡದ ಪ್ರಭುಗಳಲ್ಲಿ ಅಗ್ರಗಣ್ಯರನ್ನಾಗಿ ಮಾಡಬೇಕೆಂಬ ಕುತೂಹಲದಿಂದಲೂ, ಮೈಸೂರು ರಾಜ್ಯಭಾರವು ಸಾಂಕುಶಪ್ರವರ್ತನಕ್ಕೆ ಮಾತೃಸ್ಥಾನವಾಗಿ ರುವಂತೆ ಮಾಡಬೇಕೆಂಬ ಕುತೂಹಲದಿಂದಲೂ ಪ್ರೇರಿತರಾಗಿ, ಮಹಾ ರಾಜರವರ ವಿದ್ಯಾಭ್ಯಾಸದ ಏರ್ಪಾಡುಗಳನ್ನು 'ಗಾರ್ಡಿಯನ್'ರ ಮೂಲಕ ಕ್ರಮಪಡಿಸುವುದಕ್ಕೆ ಪ್ರಾರಂಭಮಾಡಿದರು. ಸಕಲ ಶಾಸ್ತ್ರ ಗಳಲ್ಲಿಯೂ, ಸಕಲ ವ್ಯವಹಾರಗಳಲ್ಲಿಯೂ ಅದ್ವಿತೀಯ ಪಂಡಿತ ರಾದ ಮ॥ ಜಯರಾಮರಾಯರು ಶ್ರೀಮನ್ಮಹಾರಾಜರವರಿಗೆ ವಿದ್ಯಾ ಗುರುಗಳಾಗುವಂತೆ ಏರ್ಪಾಡು ಮಾಡಿದರು. ಅವರಿಗೆ ಸಹಾಯೋ ಪಾಧ್ಯಾಯರಾಗಿರುವುದಕ್ಕೆ ರಾಯಬಹದೂರ್ ಎ. ನರಸಿಂಹಯ್ಯಂ ಗಾರ್ಯ್ಯರೇ ಮೊದಲಾದವರನ್ನು ನಿಯಮಿಸಿದರು. ಇವರು ಯಾವ ರೀತಿ ಯಲ್ಲಿ ನಡೆದುಕೊಳ್ಳಬೇಕೋ ಅದನ್ನು ತಾವೇ ತಿಳುಹಿಸಿಕೊಟ್ಟರು. ಶ್ರೀಮನ್ಮಹಾರಾಜರವರ ಸಹವಾಸದಲ್ಲಿರತಕ್ಕ ಜನಗಳನ್ನು ಶೋಧಿಸಿ ನಿರಾಕ್ಷೇಪಣೀಯರಾಗಿರುವಂತೆ ಮಾಡಿದರು. ಪಾಠ ಹೇಳುವುದಕ್ಕೆ ಇವರನ್ನೆಲ್ಲಾ ನಿಯಮಿಸಿದಾಗ್ಯೂ, ರಾಜಧರ್ಮಗಳನ್ನು ಏಕಾಂತವಾಗಿ ಉಪದೇಶಮಾಡುವ ಕೆಲಸವನ್ನು ತಾವೇ ಇಟ್ಟುಕೊಂಡರು. ಪ್ರಭು ಗಳಾದವರು ಮನೋವಾಕ್ಕಾಯಗಳಲ್ಲಿ ಹೇಗೆ ಧರ್ಮದಿಂದ ನಡೆದು ಕೊಳ್ಳಬೇಕೋ, ರಾಜ್ಯಭಾರ ಮಾಡುವುದರಲ್ಲಿ ಹೇಗೆ ಗುಣೈಕಪಕ್ಷಪಾತಿ ಗಳಾಗಿರಬೇಕೋ, ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳನ್ನು ಮಾಡು ವುದರಲ್ಲಿ ಹೇಗೆ ನಿರಾಲಸ್ಯರಾಗಿರಬೇಕೋ, ಪ್ರಜೆಗಳ ಕಷ್ಟನಿಷ್ಠುರ ಗಳನ್ನು ತಿಳಿದುಕೊಂಡು ಪರಿಹಾರಮಾಡುವುದರಲ್ಲಿ ಹೇಗೆ ಅಸಾಧಾರಣ ವಾದ ಆದರವನ್ನೂ ಉತ್ಸಾಹವನ್ನೂ ಹೊಂದಿರಬೇಕೋ, ಪ್ರಭು ಪದವಿಯು ಅತ್ಯಂತ ವಿಜೃಂಭಣೆಯುಳ್ಳದ್ದಾದರೂ ಕಾರ್ಯತಃ ಎಷ್ಟು ಕಷ್ಟಸಾಧ್ಯವಾದದ್ದೋ, ಒಂದು ಕುಟುಂಬವನ್ನು ಸರಿಯಾಗಿ ಇಟ್ಟು ಕೊಳ್ಳಬೇಕಾದರೆ ಆ ಕುಟುಂಬದ ಯಜಮಾನನಿಗೆ ಎಷ್ಟು ಕಷ್ಟವಾಗು ವುದೋ, ಲಕ್ಷಾಂತರ ಕುಟುಂಬಗಳನ್ನು ಸುಖವಾಗಿಟ್ಟುಕೊಂಡಿರ

ತಕ್ಕ ಕೆಲಸವು ಹೇಗೆ ಪ್ರಭುವಾದವರಿಗೆ ಸೇರಿರುವುದೋ, ಈ ಕೆಲಸವನ್ನು ಸರಿಯಾಗಿ ಮಾಡಿ ಮನುಮಾಂಧಾತರೇ ಮೊದಲಾದವರು ಹೇಗೆ ಕೃತಯುಗಾಲಂಕಾರಭೂತರಾದರೋ, ವರ್ತಮಾನ ಕಾಲದಲ್ಲಿ ಹೇಗೆ ಪ್ರಜಾರಂಜಕರು ಅವತಾರಪುರುಷರಂತೆ ಗಣಿಸಲ್ಪಡುವರೋ ಅಂಥಾ ಕೀರ್ತಿಯನ್ನು ಸಂಪಾದಿಸಬೇಕಾದರೆ ಪ್ರಭು ಪದವಿಗೆ ಬರತಕ್ಕವರು ಹೇಗೆ ಅಹೋರಾತ್ರಿಗಳಲ್ಲಿಯೂ ಪ್ರಜೆಗಳ ಯೋಗಕ್ಷೇಮ ಚಿಂತನೆಯನ್ನು ಮಾಡುತ್ತಲಿರಬೇಕೋ, ಹಾಗೆ ಮಾಡುತ್ತಿರತಕ್ಕ ಪ್ರಭುಗಳಲ್ಲಿ ದೇವತಾನಿರ್ವಿಶೇಷವಾದ ಭಕ್ತಿಯು ಪ್ರಜೆಗಳಿಗೆಲ್ಲಾ ಹೇಗೆ ಉಂಟಾಗಿರುವುದೋ, ಈ ವಿಷಯದಲ್ಲಿ ಉದಾಸೀನರಾದ ಪ್ರಭುಗಳಿಗೆ ಪ್ರಜೆಗಳ ಪ್ರೀತಿಯು ತಪ್ಪಿ ಪ್ರಭು ಪದವಿಗೂ ಕೂಡ ನ್ಯೂನತೆಯು ಹೇಗೆ ಬರುವುದೋ—ಇವುಗಳನ್ನೆಲ್ಲಾ ಮ॥ ರಂಗಾಚಾರ್ಯರವರು ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಪ್ರತಿನಿತ್ಯದಲ್ಲಿಯೂ ಬಹಳ ಮನೋಹರವಾದ ಇತಿಹಾಸಗಳ ಪೂರ್ವಕ ಉಪದೇಶ ಮಾಡುತ್ತಿದ್ದರು. ಈ ಸಂಸ್ಥಾನದ ಪ್ರಜಾಪ್ರತಿನಿಧಿ ಸಭೆಯು ಶ್ರೀ ಚಾಮರಾಜೇಂದ್ರ ಒಡೆಯರವರಿಂದ ಕಲ್ಪಿಸಲ್ಪಡುವುದಕ್ಕೆ ಈ ಅಸಾಧಾರಣವಾದ ಉಪದೇಶಗಳೇ ಕಾರಣಗಳಾಗಿದ್ದುವು. ಅವುಗಳ ಮಹಿಮೆಯಿಂದ ಶ್ರೀ ಚಾಮರಾಜೇಂದ್ರ ಒಡೆಯರವರ ಕಾಲದಲ್ಲಿ ಇಂಡಿಯಾ ದೇಶದ 'ನೇಟಿವ್' ಸಂಸ್ಥಾನಗಳಲ್ಲಿ ಮೈಸೂರು ರಾಜ್ಯವು ಅಗ್ರಗಣ್ಯವಾದ ಪದವಿಯನ್ನು ಹೊಂದಿತು. "ಮಾಡೆಲ್ ನೇಟಿವ್ ಸ್ಟೇಟ್" ಎಂಬ ಬಿರುದು ಮ॥ ರಂಗಾಚಾರ್ಯರ ಪ್ರಭಾವದಿಂದ ಮೈಸೂರಿಗೆ ಉಂಟಾಯಿತು.

೧೮ನೆಯ ವಯಸ್ಸಾದಕೂಡಲೇ ಶ್ರೀಮನ್ಮಹಾರಾಜರವರು ರಾಜ್ಯಭಾರಮಾಡುವುದಕ್ಕೆ ಸಂಪೂರ್ಣವಾದ ದಕ್ಷತೆಯುಳ್ಳವರೆಂದು ಭಾವಿಸಲ್ಪಟ್ಟರು. ಲಾರ್ಡ್ ಲಿಟ್ಟನ್‌ರೇ ಮೊದಲಾದ ಅನೇಕ ರಾಜ್ಯತಂತ್ರಜ್ಞರು ಮ॥ ರಂಗಾಚಾರ್ಯರ ಸರ್ವತೋಮುಖವಾದ ಪ್ರಜ್ಞೆಯನ್ನು ನೋಡಿ ವಿದ್ವತ್ತಿನಲ್ಲಿಯೂ ಅನನ್ಯ ಸಾಧಾರಣವಾದ ರಾಜ್ಯತಂತ್ರಜ್ಞತೆಯಲ್ಲಿಯೂ ಅವರು ಮಿ॥ ಗ್ಲ್ಯಾಡ್‌ಸ್ಟನ್‌ರವರಿಗೂ ಕೂಡ

ಕಡಮೆಯಾದವರಲ್ಲವೆಂದು ಸ್ವಲ್ಪವೂ ಮತ್ಸರವಿಲ್ಲದೆ ಘಂಟಾಘೋಷ ವಾಗಿ ಹೇಳುವುದಕ್ಕೆ ಉಪಕ್ರಮಿಸಿದರು. ಈ ಸಂಸ್ಥಾನವು ಶ್ರೀ ಚಾಮ ರಾಜೇಂದ್ರ ಒಡೆಯರವರಿಗೆ ಒಪ್ಪಿಸಲ್ಪಟ್ಟಾಗ ಮ|| ರಂಗಾಚಾರ್ಯರು ದಿವಾನ್‌ರಾಗಿ ನಿಯಮಿಸಲ್ಪಟ್ಟರು. ಈ ಸಂಸ್ಥಾನದ ದಿವಾನ್‌ಗಿರಿಯನ್ನು ಇವರು ೨೨ ತಿಂಗಳು ಅಲಂಕರಿಸಿದರು. ಈ ೨೨ ತಿಂಗಳುಗಳಲ್ಲಿ ಇವರು ರಾಜ್ಯಭಾರದ ಏರ್ಪಾಡುಗಳನ್ನೆಲ್ಲಾ ಒಂದು ಯಂತ್ರವಾಗಿ ಪರಿಣಮಿಸು ವಂತೆ ಮಾಡಿ, ಮುಂದೆ ದಿವಾನ್‌ಗಿರಿಗೆ ಬರತಕ್ಕವರು ತಮ್ಮಂತೆ ಯಂತ್ರ ನಿರ್ಮಾಪಕರಾಗಿರಬೇಕಾದ ಅವಶ್ಯಕತೆಯಿಲ್ಲದೆ, ಆ ಯಂತ್ರವನ್ನು ನಡೆಸತಕ್ಕ ಯಂತ್ರಚಾಲಕ(ಫೋರ್ ಮ್ಯಾನ್)ರಾಗಿ ಮಾತ್ರ ಇದ್ದರೆ ಸಕಲ ಆಡಳಿತಗಳೂ ಚರಿತಾರ್ಥವಾಗುವಂತೆ ಮಾಡಿಟ್ಟರು. ಅಹೋರಾತ್ರಿ ಯಲ್ಲಿಯೂ ವಿಶ್ರಾಂತಿ ಇಲ್ಲದೆ ಕೆಲಸಮಾಡಿ, ಅನಾರೋಗ್ಯಕ್ಕೆಗುರಿಯಾಗಿ ಇವರು ಈ ದೇಶೀಯರ ದುರದೃಷ್ಟದಿಂದ ದೇಹವನ್ನು ಬಿಟ್ಟರು. ನಾಲ್ಕೈದು ವರುಷಗಳಾದರೂ ದಿವಾನ್‌ಗಿರಿ ಮಾಡುವುದಕ್ಕೆ ಇವರಿಗೆ ಅವಕಾಶ ಉಂಟಾಗಿದ್ದರೆ ಕೃತಯುಗ ಧರ್ಮವು ಈ ಕಲಿಯುಗದಲ್ಲಿಯೇ ನಡೆಯುವಂತೆ ಇವರು ಮಾಡುತ್ತಿದ್ದರು. ಇವರ ದಿವಾನ್‌ಗಿರಿಯ ೨೨ ತಿಂಗಳುಗಳಲ್ಲಿ ದೊಡ್ಡ ಪದವಿಯಲ್ಲಿರತಕ್ಕವರೂ ಕೂಡ ಲಂಚವನ್ನು ತೆಗೆಯುವುದಕ್ಕೆ ಅತ್ಯಂತ ಭಯಪಡುತ್ತಿದ್ದರು. ಪ್ರಾಯಕವಾಗಿ ಎಲ್ಲರೂ ಪರನಾರೀಸಹೋದರರಾಗುತ್ತಾ ಬಂದಿದ್ದರು. ವೇಶ್ಯಾಸ್ತ್ರೀಯರ ಕಸಬಿಗೆ ಸಂಪೂರ್ಣವಾದ ನ್ಯೂನತೆಯುಂಟಾಗಿ, ಅವರಲ್ಲಿ ಅನೇಕರು ವಿವಾಹವನ್ನು ಮಾಡಿಕೊಂಡು ಆ ಜಘನ್ಯವಾದ ಕಸಬನ್ನು ಬಿಟ್ಟುಬಿಡು ವುದೇ ಉತ್ತಮವೆಂದು ಯೋಚನೆಮಾಡುವುದಕ್ಕೆ ಉಪಕ್ರಮಿಸಿದ್ದರು. ಪ್ರತಿಯೊಬ್ಬರೂ ತಮ್ಮ ಭುಜಬಲದಿಂದ ಸದ್ವ್ಯಾಪಾರಗಳಲ್ಲಿ ಸೇರಿ, ಆತ್ಮಾವಲಂಬನೆಯಿಂದ ಜೀವಿಸುವುದು ಉತ್ತಮವೆಂದು ಭಾವಿಸು ವುದಕ್ಕೆ ಉಪಕ್ರಮವಾಯಿತು. ಅರಮನೆಯಿಂದ 'ಗ್ರಾಟ್ಯೂಯಿಟಿ', 'ಪೆನ್‌ಷನ್' ಮೊದಲಾದವುಗಳನ್ನು ತೆಗೆದುಕೊಂಡು ಅರಮನೆಯ ಕೆಲಸದಿಂದ ನಿವೃತ್ತರಾದವರಿಗೆ ಹಿತೋಪದೇಶಗಳನ್ನು ಮಾಡಿ, ವ್ಯವ ಸಾಯ, ವಾಣಿಜ್ಯ, ಕೈಗಾರಿಕೆ ಮೊದಲಾದವುಗಳಿಂದ ಅರಮನೆಯಲ್ಲಿ

ಆಗುತ್ತಿದ್ದ ಸಂಪಾದನೆಗಿಂತಲೂ ಬಹಳ ಹೆಚ್ಚಾಗಿ ಸಂಪಾದಿಸುವ ಮಾರ್ಗಗಳನ್ನು ಇವರು ಬೋಧಿಸಿದರು. ಅವರಲ್ಲಿ ಅನೇಕರು ಉಪಪನ್ನರಾಗಿ ಈಗಲೂ ಮ|| ರಂಗಾಚಾರ್ಯರವರನ್ನು ಸ್ಮರಿಸಿಕೊಳ್ಳುತಲಿದ್ದಾರೆ. ಇವರು ಪರದೇಶೀಯರಾದಾಗ್ಯೂ ಈ ಸಂಸ್ಥಾನದ ಪ್ರಜೆಗಳನ್ನೆಲ್ಲಾ ತಮ್ಮ ಸ್ವಂತ ಕುಟುಂಬದವರೆಂದು ತಿಳಿದುಕೊಂಡು ಅವರ ಯೋಗಕ್ಷೇಮ ಚಿಂತೆಯನ್ನು ಮಾಡುತ್ತಿದ್ದರು. ಇವರ ಕಾಲದಲ್ಲಿ ಸಂಸ್ಕೃತ ವಿದ್ಯಾಭ್ಯಾಸಕ್ಕೂ ಇಂಗ್ಲಿಷ್ ವಿದ್ಯಾಭ್ಯಾಸಕ್ಕೂ ಉಪಕ್ರಮವಾಯಿತು. ದಿವಾನ್ ಪದವಿಯಲ್ಲಿದ್ದಾಗ್ಯೂ ಇವರು 'ದೊಡ್ಡವರು, ಚಿಕ್ಕವರು' ಎಂಬ ತಾರತಮ್ಯವನ್ನಿಡದೆ, ಎಲ್ಲರಲ್ಲಿಯೂ ಸೇರಿ ಮಾತನಾಡುತ್ತಾ, ಎಲ್ಲರಿಗೂ ಹಿತೋಪದೇಶವನ್ನು ಮಾಡುತ್ತಾ ಇದ್ದರು. ವಿದ್ಯಾರ್ಥಿಗಳನ್ನೂ, ಹಳ್ಳಿಯ ಗೌಡರನ್ನೂ ಕೂಡ ಇವರು ತಮ್ಮ ಸ್ವಂತ ಮಿತ್ರರಂತೆ ಭಾವಿಸುತ್ತಿದ್ದರು. ತಾವು ಎಲ್ಲರಿಗೂ ಉಪದೇಶಮಾಡುತ್ತಿದ್ದಾಗ್ಯೂ ಪ್ರಪಂಚದಲ್ಲಿರತಕ್ಕ ಸಮಸ್ತ ಜನಗಳಲ್ಲಿಯೂ ಇವರು ಗೌರವವನ್ನಿಟ್ಟುಕೊಂಡಿದ್ದರು. ಝಾಡಮಾಲಿಗಳೂ ಕೂಡ ಕೆಲವು ಬಾಬುಗಳಲ್ಲಿ ನಮಗಿಂತಲೂ ಹೆಚ್ಚು ತಿಳಿವಳಿಕೆಯುಳ್ಳವರೆಂದು ಇವರು ಭಾವಿಸುತ್ತಿದ್ದರು. ಮೊದಲನೆಯ ಪ್ರಜಾಪ್ರತಿನಿಧಿ ಸಭೆಯಲ್ಲಿ ದುರಹಂಕಾರಿಯಾದ ಒಬ್ಬ ಅಧಿಕಾರಿಯು ಪ್ರತಿನಿಧಿಯಾದ ಒಬ್ಬ ಗೌಡನನ್ನು ಪರಿಹಾಸ್ಯಮಾಡಲು, ತತ್‍ಕ್ಷಣದಲ್ಲಿಯೇ ಮ|| ರಂಗಾಚಾರ್ಯರು ಸಭೆಯವರೆಲ್ಲರೂ ಕೇಳುವಹಾಗೆ—"ನಮ್ಮ ಅಧಿಕಾರಿಗಳಿಗೆ ಒಂದೊಂದು ಭಾಗದಲ್ಲಿ ಬುದ್ಧಿಯು ಓಡುವುದು. ಅವರಿಗೆ ಅಭ್ಯಾಸವಿರತಕ್ಕ ಕೆಲಸವನ್ನು ಅವರು ಸುಮಾರಾಗಿ ಮಾಡುವರು. ಅವರಿಗೆ ಬೇರೆ ಕೆಲಸವನ್ನು ಕೊಟ್ಟರೆ ನೀರಿನಿಂದ ಈಚೆಗೆ ತೆಗೆದು ಹಾಕಲ್ಪಟ್ಟ ಮೀನಿನ ಅವಸ್ಥೆಗೆ ಇವರು ಬರುವರು. ನಮ್ಮಲ್ಲಿ ಬೇರೋಜುಗಾರರಾಗಿಯೂ, ಕೃಷಿ ವಾಣಿಜ್ಯ ಮೊದಲಾದವುಗಳನ್ನು ಮಾಡತಕ್ಕವರಾಗಿಯೂ, ಆತ್ಮಾವಲಂಬಿಗಳಾಗಿಯೂ ಇರತಕ್ಕ ರೈತರೇ ಮೊದಲಾದ ಮಹಾಜನಗಳು ಈ ಅಧಿಕಾರಿಗಳಂತೆ ಏಕಮುಖವಾದ ಪ್ರಜ್ಞೆಯುಳ್ಳವರಲ್ಲ. ಇವರ ಪ್ರಜ್ಞೆಯು ಸರ್ವತೋಮುಖವಾದದ್ದು"—

ಎಂಬುದಾಗಿ ಅಪ್ಪಣೆಕೊಡಿಸಿದರು. ಒಂದಾವರ್ತಿ ಒಬ್ಬ ದೊಡ್ಡ ಅಧಿಕಾರಿಯು—"ಪ್ರಜಾಪ್ರತಿನಿಧಿಗಳನ್ನು ಹೀಗೆ ಹೆಚ್ಚಿಸಿದರೆ ಕೊನೆಗೆ ಸರಕಾರದ ಉದ್ಯೋಗಸ್ಥರೆಲ್ಲಾ ಈ ಪ್ರತಿನಿಧಿಗಳಿಗೆ ಲಂಚಕೊಡುವ ಅವಸ್ಥೆಯು ಬರುವುದು"—ಎಂದು ಹೇಳಿದನು. ಅದಕ್ಕೆ ಮ॥ ರಂಗಾಚಾರ್ಯರು ಕೊಟ್ಟ ಉತ್ತರವು ಅವರ ಮಹಾನುಭಾವತೆಯನ್ನು ಪ್ರದರ್ಶನಮಾಡುವುದು. ಅವರು ಹೇಳಿದ್ದೇನಂದರೆ:—"ಪ್ರಜೆಗಳು ಅಹೋರಾತ್ರಿಗಳಲ್ಲಿಯೂ ಅನಿರ್ವಚನೀಯವಾದ ಕಷ್ಟಗಳನ್ನು ಪಟ್ಟು, ವ್ಯವಸಾಯ ಮೊದಲಾದವುಗಳ ಮೂಲಕ ಭೋಗ್ಯವಸ್ತುಗಳನ್ನು ನಿರ್ಮಾಣಮಾಡಿ, ಸರಕಾರಕ್ಕೆ ಕಂದಾಯವನ್ನು ಕೊಟ್ಟು, ವಿಶೇಷ ಕ್ಲೇಶವಿಲ್ಲದೆ ಭಾರೀ ಸಂಬಳವನ್ನು ಹೊಂದುವುದಕ್ಕೆ ಅವಕಾಶಮಾಡಿಕೊಟ್ಟಿದ್ದಾಗ್ಯೂ, ದುರಾತ್ಮರಾದ ಅಧಿಕಾರಿಗಳು ಅದರಲ್ಲಿ ತೃಪ್ತರಾಗದೆ, ಬಹು ಕಾಲದಿಂದ ಅನೇಕ ರೂಪಗಳಿಂದ ಅವರ ಹೃದಯದಲ್ಲಿರತಕ್ಕ ರಕ್ತವನ್ನೂ ಕೂಡ ಪಾನಮಾಡಿ ಇದಾರೆ. ಇಂಥಾ ಅಧಿಕಾರಿಗಳು ನಮ್ಮ ರೈತರಿಗೆ ಲಂಚಕೊಡುವ ಕಾಲವು ಬಂದ ಪಕ್ಷದಲ್ಲಿ ಅದಕ್ಕಾಗಿ ನಾನು ತುಂಬಾ ಸಂತೋಷಪಡುವೆನು." ಈ ಅಭಿಪ್ರಾಯವು ಮ॥ ರಂಗಾಚಾರ್ಯರಿಗೆ ಕೆಟ್ಟ ಅಧಿಕಾರಿಗಳ ವಿಷಯದಲ್ಲಿ ಎಷ್ಟು ಅಸಮಾಧಾನವಿತ್ತೋ ಅದನ್ನು ತೋರಿಸುವುದು.

ಅವರ ಚರಿತ್ರೆಯನ್ನು ಒಂದು ಪೀಠಿಕೆಯಲ್ಲಿ ತಿಳಿಸುವುದು ಅಸಾಧ್ಯ. ಒಂದು ವಿಷಯವನ್ನು ಹೇಳುವುದಕ್ಕೆ ಉಪಕ್ರಮ ಮಾಡಿದರೆ ಅದರ ಜತೆಯಲ್ಲಿ ಹೃದಯಂಗಮವಾದ ಅನೇಕ ವಿಷಯಗಳು ಸ್ಫೂರ್ತಿಗೆ ಬರುವುವು. ಅವುಗಳನ್ನೆಲ್ಲಾ ತಿಳುಹಿಸಬೇಕಾದರೆ ಒಂದು ಗ್ರಂಥವನ್ನೇ ರಚಿಸಬೇಕಾಗುತ್ತದೆ. ಇಂಥಾ ಮಹನೀಯರ ಚರಿತ್ರೆಯು ಈ ಪುಸ್ತಕದಲ್ಲಿ ಸಂಕ್ಷೇಪವಾಗಿ ಬರೆಯಲ್ಪಟ್ಟಿದೆ.

ಈ ಪೀಠಿಕೆಯು ಸ್ವಲ್ಪ ಲಂಬವಾಯಿತು. ಇದನ್ನು ಈ ಗ್ರಂಥಕರ್ತರೂ ಮತ್ತು ವಾಚಕರೂ ಮನ್ನಿಸುವರೆಂದು ನಂಬಿದ್ದೇನೆ. ಮ॥ ರಂಗಚಾರ್ಯರು ಸ್ವರ್ಗಸ್ಥರಾದಾಗ ದಿ ಆನರಬಲ್ ಕೃಷ್ಣದಾಸ ಪಾಲ್‌ರವರು ಈ ಭರತಖಂಡದ ಜ್ಯೇಷ್ಠ ಪುತ್ರರು ಸ್ವರ್ಗಸ್ಥ

ರಾದರೆಂದು ಅಪ್ಪಣೆಕೊಡಿಸಿದರು. ಇವರು ಜ್ಯೇಷ್ಠ ಪುತ್ರರು ಮಾತ್ರವೇ ಅಲ್ಲ; ಈ ಭರತಖಂಡದ ಭಾಗ್ಯಕ್ಕೆ ಅಧಿದೇವತೆಗಳಾಗಿದ್ದರೆಂದು ಭಾವಿಸಬಹುದು. ಇವರು ಮೈಸೂರು ಸಂಸ್ಥಾನದ ಏಳಿಗೆಗೆ ಮುಖ್ಯ ಕಾರಣರಾಗಿದ್ದರು. ದುಷ್ಟ ನಿಗ್ರಹವನ್ನು ಮಾಡುವುದರಲ್ಲಿ ಇವರು ಸ್ವಲ್ಪವೂ ಹಿಂದೆಗೆಯುತ್ತಿರಲಿಲ್ಲ. ನಿಗ್ರಹಿಸಲ್ಪಟ್ಟವರಲ್ಲಿ ದುರಾತ್ಮರಾದವರನೇಕರು ಇವರ ಹೆಸರನ್ನು ಕೆಡಿಸಬೇಕೆಂದು ಜಘನ್ಯವಾದ ಅನೇಕ ಪ್ರಯತ್ನಗಳನ್ನು ಮಾಡಿದರು. ಸತ್ಯಕ್ಕೂ ಧರ್ಮಕ್ಕೂ ಎಂದಿಗೂ ಚ್ಯುತಿಯುಂಟಾಗುವುದಿಲ್ಲ. ಇವರ ಧರ್ಮವು ಉಷ್ಣವಲಯದ ಸೂರ್ಯನಂತೆ ದುರಾತ್ಮರಿಂದ ಹರಡಲ್ಪಟ್ಟ ನಿಂದೆಗಳ ರೂಪವಾದ ಮಂಜನ್ನು ಬಹಳ ಸುಲಭವಾಗಿ ನಿರ್ಮೂಲ ಮಾಡಿತು.

ಎಂ. ವೆಂಕಟಕೃಷ್ಣಯ್ಯ.

---

## ಪೀಠಿಕೆ (೨)

[ಈ ಪುಸ್ತಕವನ್ನು ರಾಯ್ ಬಹದ್ದೂರ್ ಮ|| ರಾ|| ಅಂಬಿಲ್ ನರಸಿಂಹಯ್ಯಂಗಾರ್ಯರವರಿಗೆ ಕಳುಹಿಸಿರಲು ಅದನ್ನು ಅವರು ಆದರ ದಿಂದ ಸ್ವೀಕರಿಸಿ, ಗ್ರಂಥಕರ್ತನಿಗೆ ವಿಶ್ವಾಸದಿಂದ ಒಂದು ಕಾಗದವನ್ನು ಬರೆದಿರುವರು. ಆ ಮಹಾಶಯರು ರಂಗಾಚಾರ್ಯರ ಜೀವನಚರಿತೆಗೆ ಒಂದು ದೊಡ್ಡ ಪೀಠಿಕೆಯನ್ನು ಬರೆಯಲು ದೇಹ ದೌರ್ಬಲ್ಯದ ದೆಸೆ ಯಿಂದ ಅನುಕೂಲಿಸದೆ ಹೋದುದು ವಿಷಾದ ಕಾರಣವೇ ಸರಿ. ಆದರೂ ಅವರು ಬರೆದಿರುವ ಕಾಗದದಲ್ಲಿಯ ಬಹು ರಸವತ್ತಾದ ಕೆಲವು ವಾಕ್ಯ ಗಳನ್ನೀ ಕೆಳಗೆ ಪೀಠಿಕೆಯಾಗಿ ಕೊಟ್ಟಿದೆ. ರಂಗಾಚಾರ್ಯರ ಸ್ವಭಾವಕ್ಕೆ ಕನ್ನಡಿಯಂತಿರುವ, ಭಾವಗರ್ಭಿತಗಳಾದ ಈ ವಾಕ್ಯಗಳನ್ನು ಅಪ್ಪಣೆ ಕೊಡಿಸಿರುವುದಕ್ಕಾಗಿ ಗ್ರಂಥಲೇಖಕನು ಮ|| ರಾ|| ನರಸಿಂಹಯ್ಯಂ ಗಾರ್ಯರಿಗೆ ಕೃತಜ್ಞನಾಗಿರುವನು.]

"The late Mr. Rangacharlu was an eminent son of India: a saint and a genius were combined in him. I was pretty well acquainted with the late Mr. Ranade, and I compare Rangacharlu to him. Both were people's men and laboured lovingly for the country. It is difficult even to think of such selfless men as these two. They forgot even their appetite and sleep when they were absorbed in subjects affecting the well-being of the people.

"I had the rare good fortune to be associated with him,—rather more appropriately, to sit at his feet, for ten years. Every moment of these years, I saw his wisdom, strength and fellow-feeling in every thought and deed of his. Men round him were inspired to work selflessly for the good of the country. His example and influence made those who came in contact with him better men. And I can con-

fidently say that 'that remarkable statesman,' Sir Seshadri Iyer, owed to his chief Rangacharlu, not a little of the strength and the noble thoughts and deeds which characterised his service to the State and its Ruler as Dewan.

"You had only to pay a visit to the saint and genius Rangacharlu; and you could not but return home an improved man, be you a peasant, a merchant, a Vaidic or a Loukik."

"ದಿವಂಗತರಾದ ಮ|| ರಾ|| ರಂಗಾಚಾರ್ಲುರವರು ಭಾರತ ಭೂಮಾತೆಯ ಪುತ್ರರಲ್ಲಿ ಅತ್ಯುತ್ತಮರು; ಅವರಲ್ಲಿ ಸಾಧುಶ್ರೇಷ್ಠರ ಸತ್ವಗುಣವೂ ಕವಿಶ್ರೇಷ್ಠರ ಮೇಧಾಶಕ್ತಿಯೂ ಸೇರಿದ್ದುವು. ಗತಿಸಿದ ಮ|| ರಾ|| ಮಹಾದೇವ ಗೋವಿಂದ ರ್ಯಾನಡೆಯವರ ಪರಿಚಯವು ನನಗೆ ಚೆನ್ನಾಗಿತ್ತು. ನಾನು ರಂಗಾಚಾರ್ಲುರನ್ನು ಅವರಿಗೆ ಸಮಾನರೆಂದು ಎಣಿಸಿದ್ದೇನೆ. ಇಬ್ಬರೂ ಪ್ರಜಾಭಿಮಾನಿಗಳು. ಇಬ್ಬರೂ ಭಕ್ತಿಯಿಂದ ದೇಶ ಸೇವೆಯಲ್ಲಿ ದುಡಿದವರು. ಇವರಿಬ್ಬರಂತಹ ಸ್ವಾರ್ಥತೆಯಿಲ್ಲದ ಮನುಷ್ಯರು ಇರಬಹುದೆಂದು ಊಹಿಸುವುದು ಕೂಡ ಕಷ್ಟವೇ. ಅವರು ದೇಶೀಯರ ಯೋಗಕ್ಷೇಮ ಚಿಂತನೆಯಲ್ಲಿ ನಿದ್ರಾಹಾರಗಳನ್ನೂ ಮರೆಯುತ್ತಿದ್ದರು.

"ನನ್ನ ಸುಕೃತವಶದಿಂದ ನನಗೆ ಹತ್ತು ವರ್ಷಗಳ ಕಾಲ ರಂಗಾಚಾರ್ಲುರವರ ಸಹವಾಸವು—ಹಾಗಲ್ಲ, ಅವರ ಪಾದಸೇವೆಯು ದೊರೆತಿದ್ದಿತು. ಆ ಕಾಲದಲ್ಲಿ ಅವರ ಮನೋವಾಕ್ಕಾಯಗಳ ಪ್ರತಿಯೊಂದು ವ್ಯಾಪಾರದಲ್ಲಿಯೂ ಅವರ ಪ್ರಾಜ್ಞತೆಯನ್ನೂ, ಧೀರತೆಯನ್ನೂ, ಜನಾನುರಾಗವನ್ನೂ ನಾನು ಕ್ಷಣೇಕ್ಷಣೇ ಕಾಣುತ್ತಿದ್ದೆನು. ಅವರ ಸುತ್ತುಮುತ್ತಲಿದ್ದ ಜನರು ದೇಶಹಿತಕ್ಕಾಗಿ ಸ್ವಾರ್ಥವನ್ನು ಬಿಟ್ಟು ಕೆಲಸಮಾಡುವಂತೆ ಅವರಿಂದ ಪ್ರೇರಿಸಲ್ಪಡುತ್ತಿದ್ದರು. ಅವರ ನಿದರ್ಶನದಿಂದಲೂ ಮಹಿಮೆಯಿಂದಲೂ ಅವರ ಸಹವಾಸದಲ್ಲಿದ್ದವರು ಉತ್ತಮರಾಗುತ್ತಿದ್ದರು. 'ಆ ಪ್ರಸಿದ್ಧ ರಾಜ್ಯತಂತ್ರನಿಪುಣ'ರಾದ ಸರ್ ಶೇಷಾದ್ರಿ ಅಯ್ಯರವರು ದಿವಾನರಾಗಿ, ರಾಜ್ಯಕ್ಕೂ ರಾಜರಿಗೂ

ಸೇವೆ ಮಾಡುವುದರಲ್ಲಿ ತೋರಿಸಿದ ಸಾಮರ್ಥ್ಯವನ್ನೂ, ಮನಶ್ಶುದ್ಧಿಯನ್ನೂ, ಕರ್ಮಶುದ್ಧಿಯನ್ನೂ ಬಹುಮಟ್ಟಿಗೆ ತಮ್ಮ ಅಧಿನಾಯಕರಾಗಿದ್ದ ರಂಗಾಚಾರ್ಯರವರಿಂದಲೇ ಕಲಿತರೆಂದು ನಾನು ಧಾರಾಳವಾಗಿ ಹೇಳಬಲ್ಲೆ.

"ಸಾಧುಶ್ರೇಷ್ಠರೂ ಬುಧಶ್ರೇಷ್ಠರೂ ಆಗಿದ್ದ ರಂಗಾಚಾರ್ಯರವರ ಬಳಿಗೆ ಯಾರಾದರೂ ಒಂದಾವರ್ತಿ ಹೋಗಿದ್ದಿದ್ದರೆ ಸಾಕು; ಆತನು—ರೈತನಾಗಿರಲಿ, ವರ್ತಕನಾಗಿರಲಿ, ವೈದಿಕನಾಗಿರಲಿ, ಲೌಕಿಕನಾಗಿರಲಿ—ಖಂಡಿತವಾಗಿಯೂ ಉತ್ತಮನಾಗಿ ಮನೆಗೆ ಹಿಂದಿರುಗುತಲಿದ್ದನು."

ದಿ ವಾ ನ್

ಶೆಟ್ಟಿಪುಣ್ಯಾಂ ವೀರವಳ್ಳಿ

# ರಂಗಾಚಾರ್ಲು, ಸಿ.ಐ.ಇ.

## ಪರಿಚ್ಛೇದ ೧

## ಉಪೋದ್ಘಾತ

ನರಪತಿಹಿತಕರ್ತಾ ದ್ವೇಷ್ಯತಾಂ ಯಾತಿ ಲೋಕೇ ।
ಜನಪದಹಿತಕರ್ತಾ ತ್ಯಜ್ಯತೇ ಪಾರ್ಥಿವೇನ ॥
ಇತಿ ಮಹತಿ ವಿರೋಧೇ ವಿದ್ಯಮಾನೇ ಸಮಾನೇ ।
ನೃಪತಿ ಜನಪದಾನಾಂ ದುರ್ಲಭಃ ಕಾರ್ಯಕರ್ತಾ ॥

"ರಾಜನಿಗೆ ಒಳ್ಳೆಯದನ್ನು ಮಾಡುವವನು ಲೋಕದಲ್ಲಿ ಜನರ ದ್ವೇಷಕ್ಕೆ ಗುರಿಯಾಗುತ್ತಾನೆ. ಪ್ರಜೆಗಳಿಗೆ ಒಳ್ಳೆಯದನ್ನು ಮಾಡುವವನು ರಾಜನಿಂದ ತ್ಯಜಿಸಲ್ಪಡುತ್ತಾನೆ. ಹೀಗೆ ಎರಡು ಕಡೆಯೂ ವಿರೋಧವೇ ಇರುವಲ್ಲಿ, ಅವರಿರ್ವರಿಗೂ ಹಿತವನ್ನು ಮಾಡಬಲ್ಲಂಥವನು ದೊರೆಯುವುದು ಕಷ್ಟ."

ಮೈಸೂರು ದೇಶದವನಾಗಿದ್ದುಕೊಂಡು ದಿವಾನ್ ರಂಗಾಚಾರ್ಯರ* ಹೆಸರನ್ನರಿಯೆನೆಂದು ಹೇಳುವಾತನಿಗೆ ಸ್ವದೇಶ ಚರಿತ್ರೆಯಲ್ಲಿ ಅಭಿಮಾನವು ಸಾಲದೆಂಬುದು ಸ್ಪಷ್ಟವಾಗಿರುವುದು. ಇಂದಿಗೆ (ಕ್ರಿ. ಶ. ೧೯೨೮) ಸುಮಾರು ೪೮ ವರ್ಷಗಳ ಹಿಂದೆ (ಕ್ರಿ. ಶ. ೧೮೮೧

* "ರಂಗಾಚಾರ್ಲು" ಎಂಬ ಹೆಸರು "ರಂಗಾಚಾರ್ಯ" ಎಂಬ ಸಂಸ್ಕೃತ ಪದದ ತೆಲುಗುರೂಪವಾದ "ರಂಗಾಚಾರ್ಯುಲು" ಎಂಬ ಮಾತಿನ ರೂಪಾಂತರ. ನಮ್ಮ ಕಥಾನಾಯಕರು "ರಂಗಾಚಾರ್ಲು" ಎಂಬ ಹೆಸರನ್ನೇ ವ್ಯವಹಾರದಲ್ಲಿಟ್ಟುಕೊಂಡಿದ್ದರು. ನಾವು ಕನ್ನಡದಲ್ಲಿ ಆ ಹೆಸರನ್ನು ಉಪಯೋಗಿಸುವಾಗ ತೆಲುಗಿನ ಅಂಶವನ್ನು ತೆಗೆದು ಹಾಕಿ "ರಂಗಾಚಾರ್ಯರು" ಎಂದು ವ್ಯವಹರಿಸುವುದು ಸಾಧುವೆಂದು ತೋರುತ್ತದೆ.

ರಲ್ಲಿ) ಈ ಸಂಸ್ಥಾನದ ಪುನಃಪ್ರತಿಷ್ಠಾಪನೆಯಲ್ಲಿ ಸಹಾಯಕರಾಗಿದ್ದು, ಅನಂತರ ಅದರ ಪ್ರಥಮ ಮಂತ್ರಿಯಾಗಿ ದುಡಿದು, ನಮ್ಮ ರಾಜ್ಯ ಪರಿಪಾಲನ ಕ್ರಮವನ್ನು ಸುವ್ಯವಸ್ಥೆಗೆ ತಂದು, ಸರಕಾರವು * ಯಾವಾಗಲೂ ಪ್ರಜಾಭಿಪ್ರಾಯವನ್ನೇ ಅನುಸರಿಸಬೇಕೆಂಬ ಘನ ನೀತಿಯನ್ನು ಸ್ಥಾಪಿಸಿ, ಮೈಸೂರಿನ ಉಚ್ಛ್ರಾಯಕ್ಕೂ ಗೌರವಕ್ಕೂ ಬೀಜಾವಾಪ ಮಾಡಿದ ಮಹನೀಯರೇ ರಂಗಾಚಾರ್ಯರು.

ನಮ್ಮ ದೇಶದಲ್ಲಿ ರಾಜ್ಯತಂತ್ರಜ್ಞರೆಂದು ಹೆಸರುಗೊಂಡವರ ರೀತಿಗಳು ಅನೇಕವಾಗಿರುವುವು. ಅವರಲ್ಲಿ ಕೆಲವರು ಮೇಲಿನವರಿಗೆ ವಿಧೇಯತೆಯನ್ನು ತೋರುವ ಒಂದು ಗುಣದಿಂದಲೇ ದೊಡ್ಡ ಪದವಿಗೆ ಹತ್ತಿದವರು ; ಕೆಲವರು ಹಲವು ಬಗೆಯ ಉಪಾಯಗಳಿಂದ ಸಮಾನಸ್ಕಂಧರನ್ನು ಹಿಂದಕ್ಕೆ ತಳ್ಳಿ ಮುಂದಕ್ಕೆ ಬಂದವರು ; ಕೆಲವರು ದರ್ಪ ಆಡಂಬರಗಳನ್ನು ತೋರಿ ಸಮರ್ಥರೆಂದೆನಿಸಿಕೊಂಡವರು ; ಕೆಲವರು ಪ್ರಬಲರೂ ಮಾತುಗಾರರೂ ಆದ ಜನರಿಗೆ ಉಪಕಾರಿಗಳಾಗಿದ್ದು ಸ್ತೋತ್ರಪಾತ್ರರಾದವರು ; ಕೆಲವರು ವೇತನೌದಾರ್ಯ, ಪುರಾಲಂಕಾರ ಮುಂತಾದ ಕೆಲ ಕೆಲವು ಮಂದಿಗೆ ಮಾತ್ರ ಉಪಯುಕ್ತವಾಗುವ ತಾತ್ಕಾಲಿಕ ಹಿತಕಾರ್ಯಗಳಿಂದ ದೊಡ್ಡ ಯಶಸ್ಸನ್ನು ಸಂಪಾದಿಸಿದವರು; ಕೆಲವರು ಯಾವ ಹೆಚ್ಚು ಗೋಜಿಗೂ ಹೋಗದೆ ದೀರ್ಘಕಾಲ ಉದ್ಯೋಗದಲ್ಲಿದ್ದವರೆಂಬ ಕಾರಣದಿಂದಲೇ ಪ್ರಶಸ್ತಿಯನ್ನು ಪಡೆದವರು. ರಾಜನೀತಿಯ ಮೂಲ ತತ್ತ್ವವನ್ನರಿತು, ದೂರದೃಷ್ಟಿಯುಳ್ಳವರಾಗಿ, ಪ್ರಜಾ ಸಮುದಾಯವೆಲ್ಲಕ್ಕೂ ಪುರೋವೃದ್ಧಿಯನ್ನು ಬಯಸಿ, ನಿಜವಾದ ರಾಜ್ಯೋಚ್ಛ್ರಾಯವನ್ನು ಸಾಧಿಸಿದ ಸಚಿವ

---

* "ಸರಕಾರ" (ಸರ್ಕಾರ) ಎಂಬ ಮಾತು "ಸರ್ವಕಾರ" ಅಥವಾ "ಸರ್ವಕಾರ್ಯ" ಎಂಬ ಸಂಸ್ಕೃತ ಪದದ ರೂಪಾಂತರವಿರಬಹುದು. "ಸರ್ವಕಾರ" ಎಂದರೆ ಎಲ್ಲವನ್ನೂ ಮಾಡಬಲ್ಲ ಶಕ್ತಿ ಅಥವಾ ಅಧಿಕಾರ ಎಂದೂ, "ಸರ್ವಕಾರ್ಯ" ಎಂದರೆ ಎಲ್ಲರಿಗೂ ಸೇರಿದ ಕೆಲಸವೆಂದೂ ಅರ್ಥವು ಸ್ಪಷ್ಟವಾಗಿದೆ. ಯಾವ ಅರ್ಥದ ದೃಷ್ಟಿಯಿಂದ ನೋಡಿದರೂ ಈ ಪದವು ರಾಜ್ಯದ ಮುಖ್ಯ ಲಕ್ಷಣವನ್ನು ಸೂಚಿಸತಕ್ಕುದಾಗಿಯೂ, "ಗವರ್ನ್‌ಮೆಂಟ್" ಎಂಬ ಇಂಗ್ಲಿಷ್ ಪದದ ಭಾವವನ್ನೊಳಗೊಂಡುದಾಗಿಯೂ ಕಾಣುತ್ತದೆ.

ಧರ್ಮ ಪಾರಂಗತರು ನಮ್ಮ ಕಾಲದ ಇಂಡಿಯಾ ದೇಶದಲ್ಲಿ ಬಹು ಮಂದಿ ಇಲ್ಲ. ವಿರಳರಾಗಿರುವ ಇಂತಹ ಮಹಾಪುರುಷರಲ್ಲಿ ರಂಗಾ ಚಾರ್ಯರು ಅಗ್ರಗಣ್ಯರೆನಿಸಿರುವರು. ರಾಜ್ಯ ಕಾರ್ಯದಲ್ಲಿ ಅತಿ ವಿಚಕ್ಷಣರೆಂದು ಪ್ರಸಿದ್ಧರಾಗಿರುವ ಬ್ರಿಟಿಷ್ ಸರಕಾರದವರಿಗೆ ಸಹ ರಂಗಾಚಾರ್ಯರು ಮಾರ್ಗದರ್ಶಕರಾಗುವಂತೆ ನಡೆದವರು. ಇತರ ತೆರದ ರಾಜ್ಯನಿರ್ವಾಹಕರ ಹೆಸರು ಜನರಿಗೆ ಮರೆತುಹೋಗಿ ಬಹು ಕಾಲವಾದರೂ, ರಂಗಾಚಾರ್ಯರ ಹೆಸರು ಈ ದೇಶದಲ್ಲಿ ಅತ್ಯಂತ ಕೃತಜ್ಞತೆಯಿಂದ ಸ್ಮರಿಸಲ್ಪಡುತ್ತಿರುವುದೆಂಬುದಕ್ಕೆ ಸಂದೇಹವಿಲ್ಲ.

ಸದ್ಯಕ್ಕೆ ರಂಗಾಚಾರ್ಯರ ಖ್ಯಾತಿಯು ಇತರ ಕೆಲಮಂದಿ ಭಾರತೀಯ ರಾಜ್ಯಮಂತ್ರಿಗಳ ಖ್ಯಾತಿಯಷ್ಟು ವಿಶಾಲವಾಗಿ ವ್ಯಾಪಿಸಿಲ್ಲ ವೆಂಬುದೇನೋ ನಿಜ. ಆದರೆ ಅದಕ್ಕಿರುವ ಕಾರಣಗಳನ್ನು ವಿಚಾರಿಸಿ ನೋಡುವವರಿಗೆ ರಂಗಾಚಾರ್ಯರ ಕೀರ್ತಿಯು ಹೇಗೆ ಚಿರಕಾಲ ನಿಲ್ಲ ತಕ್ಕುದೆಂಬುದು ಗೊತ್ತಾಗುವುದು. ಆ ಕಾರಣಗಳಾವುವೆಂದರೆ:— (೧) ರಂಗಾಚಾರ್ಯರು ಸಾಚಿವ್ಯಭಾರವನ್ನು ಸ್ವತಃ ವಹಿಸಿದ್ದುದು ಎರಡೇ ವರ್ಷ; ತಮ್ಮ ಉದ್ದೇಶಗಳೆಲ್ಲವನ್ನೂ ಪೂರ್ತಿಯಾಗಿ ನೆರವೇರಿ ಸಲು ಅವರಿಗೆ ಸಾಕಾದಷ್ಟು ಕಾಲ ದೊರೆಯದೆ ಹೋಯಿತು. ಇದರಿಂದ ಅವರ ಮಹತ್ತ್ವವೆಂತಹುದೆಂಬುದನ್ನು ತಿಳಿಯಲು ಸಾಮಾನ್ಯ ಜನರಿಗೆ ಅವಕಾಶ ಕಡಿಮೆಯಾಯಿತು. (೨) ಅವರು ಮಾಡಿದ ಉಪಕಾರಗಳಲ್ಲಿ ಅತಿ ಮುಖ್ಯವಾದುದರ ಸ್ವರೂಪವನ್ನು ವಿಶದವಾಗಿ ತಿಳಿದುಕೊಳ್ಳಲು ಆಗಬೇಕಾದ ಬುದ್ಧಿಸಂಸ್ಕಾರವು ಜನ ಸಾಮಾನ್ಯಕ್ಕೆ ಈಗೀಗತಾನೆ ಆಗುತ್ತಿದೆ. ಪ್ರಜಾಪ್ರತಿನಿಧಿ ಪ್ರಭುತ್ವದ ಭಾವನೆಗಳು ನಮ್ಮ ದೇಶದಲ್ಲಿ ಈಗೀಗ ಹರಡುತ್ತಿವೆ. ಅವು ಬೇರೂರಿ, ಪ್ರಜಾಧರ್ಮವು ಅಭಿವೃದ್ಧಿಗೆ ಬಂದಹಾಗೆಲ್ಲಾ ರಂಗಾಚಾರ್ಯರು ಮಾಡಿದ ಕೆಲಸಗಳ ಮತ್ತು ಅವರು ಹಾಕಿದ ಮೇಲ್ಪಂಕ್ತಿಯ ವಿಷಯ ದಲ್ಲಿ ಜನರ ಮೆಚ್ಚಿಕೆಯು ಹೆಚ್ಚಲೇ ಬೇಕು.

ಸಾಮಾನ್ಯವಾಗಿ ರಾಜರಾದವರಲ್ಲಿಯೂ ಮಂತ್ರಿಗಳಾದವ ರಲ್ಲಿಯೂ ನಿಜವಾದ ಪ್ರಜಾಹಿತ ಚಿಂತಕರು ವಿರಳರಾಗಿಯೇ ಇರುವ

ರೆಂಬ ಮಾತು ಹಾಗಿರಲಿ. ಪ್ರಜಾ ಹಿತಕರ್ತರೇ ಆದ ಮಂತ್ರಿಗಳಲ್ಲಿಯೂ ಎರಡು ಬಗೆಯುಂಟು. ಪ್ರಜೆಗಳ ನೈಜಶಕ್ತಿಯನ್ನೂ ಸಾಹಸವನ್ನೂ ಉತ್ತೇಜನಗೊಳಿಸಿ, ಅವರು ತಮ್ಮ ಏಳಿಗೆಯನ್ನು ಸ್ವಪ್ರಯತ್ನದಿಂದಲೇ ಸಾಧಿಸಿಕೊಳ್ಳುವಂತೆ ಮಾಡತಕ್ಕ ಮಂತ್ರಿಗಳು ಒಂದು ಬಗೆಯವರು. ಪ್ರಜೆಗಳು ಕೃಪೆಗೆ ಮಾತ್ರ ಅರ್ಹರೆಂದು ಭಾವಿಸಿ ಅವರಿಗೆ ಉಪಕಾರ ಗಳನ್ನು ಮಾಡುತ್ತ, ಅವರ ಸ್ವಶಕ್ತಿಯ ವಿಚಾರಕ್ಕೆ ಗಮನಕೊಡದೆ ಇರುವ ಮಂತ್ರಿಗಳು ಇನ್ನೊಂದು ಬಗೆಯವರು. ಅನ್ನಪ್ರದಾತರಲ್ಲಿ ಎರಡು ಜಾತಿಯಿರುವುದಲ್ಲವೆ? ಸತ್ರಗಳನ್ನು ಕಟ್ಟಿಸಿ ಭೋಜನವನ್ನಿಡಿ ಸುವವರು ಕೆಲವರು; ಉದ್ಯೋಗ ಮಾರ್ಗಗಳನ್ನು ಕಲ್ಪಿಸಿ, ಜೀವನೋ ಪಾಯವನ್ನು ಬೇಕಾದವನು ತಾನೇ ಸಂಪಾದಿಸಿಕೊಳ್ಳುವಂತೆ ಮಾಡುವ ವರು ಇನ್ನು ಕೆಲವರು. ಉಪಾಧ್ಯಾಯರಲ್ಲಿಯೂ ಎರಡು ಜಾತಿಯುಂಟ ಲ್ಲವೆ? ವಿದ್ಯಾರ್ಥಿಯನ್ನು ಶುಕಪಾಠದಲ್ಲಿ ಪ್ರವೀಣನನ್ನಾಗಿಸಿ ಪರೀಕ್ಷೆ ಯಲ್ಲಿ ತೇರ್ಗಡೆಹೊಂದಿಸುವವರು ಕೆಲಮಂದಿ; ವಿದ್ಯಾರ್ಥಿಯು ಸ್ವಬುದ್ಧಿಯಿಂದ ಶ್ರಮಪಟ್ಟು ನಿಜವಾದ ಜ್ಞಾನಾಭಿವೃದ್ಧಿಯನ್ನು ಪಡೆ ಯುವಂತೆ ಮಾಡುವವರು ಇನ್ನು ಕೆಲಮಂದಿ. ರಾಜ್ಯ ಪರಿಪಾಲಕ ರಲ್ಲಿಯೂ ಹೀಗೆಯೇ. ಪ್ರಜೆಗಳು ಅಲ್ಪಜ್ಞರು, ಅಸಮರ್ಥರು; ಅವರನ್ನು ಆಶ್ರಿತ ಸ್ಥಾನದಲ್ಲಿರಿಸಿ, ಅವರಿಗೆ ಯಾವುದು ಒಳ್ಳೆಯದೋ ಅದನ್ನು ತಾವೇ ನಿರ್ಧರಿಸಿ, ತಮ್ಮ ಅಧಿಕಾರ ಬಲದಿಂದಲೇ ಅದನ್ನು ನಡೆಯಿಸಿಕೊಡಬೇಕೆನ್ನುವ ಮಂತ್ರಿಗಳು ಕೆಲಮಂದಿ. ಪ್ರಜೆಗಳು ಸದ್ಯಃ ಅಲ್ಪಜ್ಞರೂ ಅಶಕ್ತರೂ ಆಗಿದ್ದರೂ, ಅವರ ಜ್ಞಾನ ಸಾಮರ್ಥ್ಯ ಗಳನ್ನು ಅಭಿವೃದ್ಧಿಗೊಳಿಸಿ, ಕ್ರಮೇಣ ಅವರು ತಮಗೆ ಒಳ್ಳೆಯದಾವು ದೆಂಬುದನ್ನು ಅವರೇ ತಿಳಿದುಕೊಂಡು, ಅದನ್ನು ಕೂಡಿದ ಮಟ್ಟಿಗೆ ಅವರ ಸ್ವಂತ ಪ್ರಯತ್ನದಿಂದಲೇ ನಡೆಯಿಸಿಕೊಳ್ಳುವಂತೆ ಮಾಡಬೇಕೆನ್ನುವ ಮಂತ್ರಿಗಳು ಇನ್ನು ಕೆಲಮಂದಿ. ಕೆಲವರು ವರಗಳನ್ನು ನೀಡುವವರು; ಇನ್ನು ಕೆಲವರು ಹಕ್ಕುಗಳನ್ನು ತೋರಿಸಿಕೊಡುವವರು. ಕೆಲವರು ಜನರ ಬಾಹ್ಯಹಿತವನ್ನು ಮಾತ್ರ ನೋಡತಕ್ಕವರು; ಇನ್ನು ಕೆಲವರು ಅವರ ಆಂತರಿಕಹಿತವನ್ನೂ ಕೂಡ ನೋಡತಕ್ಕವರು. ಕೆಲವರು ತಮ್ಮ

ಕೈಯಿಂದ ಪ್ರಜೆಗಳಿಗಾಗಿ ಕೆಲಸಮಾಡತಕ್ಕವರು; ಇನ್ನು ಕೆಲವರು ಪ್ರಜೆಗಳ ಕೈಯಿಂದಲೂ ಕೆಲಸಮಾಡಿಸತಕ್ಕವರು. ಈ ಎರಡು ಜಾತಿಗಳಲ್ಲಿ ರಂಗಾಚಾರ್ಯರು ಪ್ರಜಾಶಕ್ತಿ ಪ್ರವರ್ಧಕರಾದ ಎರಡನೆಯ ತೆರದ ಮಂತ್ರಿಗಳ ಗುಂಪಿಗೆ ಸೇರತಕ್ಕವರು. ಇಂಗ್ಲೆಂಡಿನ ಗ್ಲ್ಯಾಡ್‌ಸ್ಟನರೂ ಅಮೆರಿಕದ ಏಬ್ರಹಂ ಲಿಂಕನರೂ ಈ ಗುಂಪಿನವರು.

ರಂಗಾಚಾರ್ಯರಲ್ಲಿ ಬಳಕೆಯುಳ್ಳವರಾಗಿದ್ದು ಅವರ ಕಾರ್ಯಕಲಾಪವನ್ನು ಕಣ್ಣಾರ ಕಂಡ ಮಹಾಶಯರಿಬ್ಬರು ಅವರ ಗುಣಾತಿಶಯಗಳನ್ನು ಪೀಠಿಕಾ ಪ್ರಕರಣಗಳಲ್ಲಿ ಕೊಂಡಾಡಿರುವರು. ಅವರ ಮಾತುಗಳಲ್ಲಿ ಅತಿಶಯೋಕ್ತಿಯೇನೂ ಇಲ್ಲವೆಂಬುದು ಈ ಮುಂದಿನ ಪುಟಗಳನ್ನೋದುವವರಿಗೆ ತಾನಾಗಿ ತೋರಿಬರುವುದೆಂದು ಲೇಖಕನ ನಂಬಿಕೆ.

ಮಹನೀಯರ ಜೀವಿತ ಕಥೆಗಳು ಅನೇಕ ನಯ ನೀತಿಗಳನ್ನು ಬೋಧಿಸಿ, ಧೈರ್ಯ, ಸ್ಥೈರ್ಯ, ಉತ್ಸಾಹ, ಪ್ರತಿಜ್ಞಾಬದ್ಧತೆ, ಪ್ರಯತ್ನಶೀಲತೆ, ಯುಕ್ತಾಯುಕ್ತ ವಿಚಾರಪರತೆ, ಧರ್ಮಸೂಕ್ಷ್ಮ ಪರಿಜ್ಞಾನ, ಲೌಕಿಕಕಾರ್ಯ ವಿಚಕ್ಷಣೆ—ಇವೇ ಮೊದಲಾದ ಶ್ರೇಷ್ಠ ಗುಣಗಳನ್ನು ವಾಚಕರಲ್ಲಿ ಉಂಟುಮಾಡಬಲ್ಲುವೆಂಬುದು ಎಲ್ಲರೂ ಒಪ್ಪಿರುವ ಮಾತು. ಅದರಲ್ಲಿಯೂ ರಾಜಕೀಯ ವೃತ್ತಿಯನ್ನವಲಂಬಿಸಿ, ಆ ಮೂಲಕ ಲೋಕೋಪಕಾರ ಮಾಡಿದವರ ವೃತ್ತಾಂತವು ನೀತಿ ಬೋಧಕವಾಗಿರುವುದಲ್ಲದೆ, ದೇಶಸೇವೆ ಮಾಡಬೇಕೆಂದಿಚ್ಛಿಸುವವರಿಗೆ ಬೇಕಾದ ಅನೇಕ ಚರಿತ್ರಾಂಶಗಳನ್ನೂ ಬೋಧಿಸತಕ್ಕುದಾಗಿರುವುದು. ಈ ಪರಿಚ್ಛೇದದ ಮೇಲಿನ ಶ್ಲೋಕದಲ್ಲಿ ವರ್ಣಿಸಲ್ಪಟ್ಟಿರುವಂತಹ ಸಾಮರ್ಥ್ಯವು ಎಷ್ಟು ಅಸಾಧಾರಣವಾದುದೆಂಬುದನ್ನು ಆಲೋಚಿಸಿರುವವರಿಗೆ, ರಂಗಾಚಾರ್ಯರ ಜೀವನ ಕಥೆಯಲ್ಲಿ ಆದರಣೆಯು ಸ್ವಾಭಾವಿಕವಾಗಿಯೇ ಹುಟ್ಟೀತು.

# ಪರಿಚ್ಛೇದ ೨

## ಕುಲ—ಬಾಲ್ಯ—ವಿದ್ಯಾಭ್ಯಾಸ

"ಬಡವಂ ಬಲ್ಲಿದನಾಗನೆ ?"

ಯಾವ ವರ್ಷ ಬ್ರಿಟಿಷ್ ಸರಕಾರದವರು ಮೈಸೂರು ರಾಜ್ಯವನ್ನು ಆಳಿದ ಮುಮ್ಮಡಿ ಶ್ರೀ ಕೃಷ್ಣರಾಜ ಒಡೆಯರವರಿಂದ ಸ್ವಾಧೀನಕ್ಕೆ ತೆಗೆದುಕೊಂಡರೋ ಅದೇ ವರ್ಷ (ಕ್ರಿ. ಶ. ೧೮೩೧ರಲ್ಲಿ—ವಿಕೃತಿ ಸಂವತ್ಸರ ಫಾಲ್ಗುಣ ಬಹುಳ ೧೧ ಶುಕ್ರವಾರ ರೇವತೀ ನಕ್ಷತ್ರದಲ್ಲಿ) ಈ ರಾಜ್ಯದ ಪುನರುಜ್ಜೀವನಕ್ಕೆ ಸಹಾಯಕರಾದ 'ಶೆಟ್ಟಿಪುಣ್ಯಂ *ವೀರವಳ್ಳಿ ರಂಗಾಚಾರ್ಲು' ಅವರು ಮದರಾಸ್ ಆಧಿಪತ್ಯದ ಚಂಗಲ್ಪಟ್ಟು ಜಿಲ್ಲೆಯ ಕೊಳತ್ತೂರೆಂಬ ಹಳ್ಳಿಯಲ್ಲಿ ಹುಟ್ಟಿದರು. ಅವರು ಶ್ರೀವೈಷ್ಣವ ಬ್ರಾಹ್ಮಣರು. ಅವರ ಮನೆತನವು ಮಾನ್ಯವಾದುದು. ರಂಗಾಚಾರ್ಯರ ಅಜ್ಜಂದಿರಾದ ನರಸಿಂಹಾಚಾರ್ಯರು ಭೂಸ್ಥಿತಿಯಿಂದ ಜೀವನ ಮಾಡುತ್ತಿದ್ದರು. ರಂಗಾಚಾರ್ಯರ ತಂದೆಯವರಾದ ರಾಘವಾಚಾರ್ಯರು ಕಛೇರಿಯಲ್ಲಿ ಗುಮಾಸ್ತೆಯಾಗಿದ್ದರು. ರಂಗಾಚಾರ್ಯರ ತಾಯಿಯ ಹೆಸರು ಕನಕಮ್ಮನವರೆಂದು.

ರಂಗಾಚಾರ್ಯರ ಒಡಹುಟ್ಟಿದವರು ಮೂವರು :—

(೧) ನರಸಿಂಹಾಚಾರ್ಲು—ಹೊಸೂರು ತಹಸೀಲ್‌ದಾರರಾಗಿದ್ದವರು,
(೨) ರಂಗಾಚಾರ್ಲು,
(೩) ಲಕ್ಷ್ಮಮ್ಮ,
(೪) ಶ್ರೀನಿವಾಸಯ್ಯಂಗಾರ್ಯ—ತಿರುಚನಾಪಳ್ಳಿಯಲ್ಲಿ ಸರಕಾರದ ಉದ್ಯೋಗದಲ್ಲಿದ್ದವರು.

---

* "ಶೆಟ್ಟಿಪುಣ್ಯಂ" ಎಂಬ ಹಳ್ಳಿಗೆ ಜಟ್ಟಿಪುಣ್ಯಂ ಎಂದೂ ಹೆಸರುಂಟತೆ. ಆ ಗ್ರಾಮದಲ್ಲಿ ಜಟ್ಟಿಗಳು ವಿಶೇಷವಾಗಿದ್ದರೆಂದೂ, ಅವರು ಬ್ರಾಹ್ಮಣರಿಗೆ ಆಶ್ರಯವನ್ನು ಕೊಟ್ಟು ಆ ಗ್ರಾಮವನ್ನು ಅವರಿಗೇ ಬಿಟ್ಟುಕೊಟ್ಟ ಕಾರಣ ಅದಕ್ಕೆ ಜಟ್ಟಿಪುಣ್ಯವೆಂದು ಹೆಸರಾಯಿತೆಂದೂ ಕಥೆಯೊಂದುಂಟು. ರಂಗಾಚಾರ್ಯರ ಪೂರ್ವಿಕರು ಅಲ್ಲಿ ವಾಸವಾಗಿದ್ದರು.

ತಿರುವಾಂಕೂರು ದಿವಾನರಾಗಿದ್ದು ಪ್ರಸಿದ್ಧರಾದ ವೆಂಬಾಕಂ ರಾಮಯ್ಯಂಗಾರ್, ಸಿ.ಎಸ್.ಐ., ಅವರೂ, ಮದ್ರಾಸಿನಲ್ಲಿ ವಕೀಲರಾಗಿದ್ದು ಪ್ರಸಿದ್ಧರಾದ ಸರ್ ಟಿ. ಭಾಷ್ಯಂ ಅಯ್ಯಂಗಾರ್ಯರೂ ರಂಗಾಚಾರ್ಯರ ಸಮೀಪ ಬಂಧುಗಳು.

ತಮ್ಮ ಮಕ್ಕಳಿಗೆ "ಇಂಗ್ಲಿಷ್" ವಿದ್ಯಾಭ್ಯಾಸಮಾಡಿಸಬೇಕೆಂದು ರಾಘವಾಚಾರ್ಯರಿಗೆ ಬಹುವಾಗಿ ಕುತೂಹಲವಿತ್ತು. ಆದರೆ ಅವರ ಸಂಸಾರ ದೊಡ್ಡದು, ವರುಮಾನ ಚಿಕ್ಕದು. ಇಂಥಾ ಸನ್ನಿವೇಶಗಳು ನಮ್ಮ ದೇಶದಲ್ಲಿ ಸಾಮಾನ್ಯವೇ ಅಲ್ಲವೆ? ತಕ್ಕ ಉಪಪತ್ತಿಯಿಲ್ಲದೆ ರಾಘವಾಚಾರ್ಯರು ಚಿಂತಿಸುತ್ತಿರುವಾಗ ಅವರ ಸಹೋದರರೊಬ್ಬರು ಮೃತಿ ಹೊಂದಲಾಗಿ, ಸುಮಾರು ೮೦೦ ರೂಪಾಯಿಗಳಷ್ಟು ಆಸ್ತಿಯು ಅವರಿಗೆ ದಾಯಭಾಗವಾಗಿ ದೊರೆಯಿತು; ಮತ್ತು ಕೆಲವು ದಿನಗಳಲ್ಲಿಯೇ, ಮದ್ರಾಸಿನಲ್ಲಿ ಮೊಟ್ಟಮೊದಲನೆಯ (ನೇಟಿವ್) ದೇಶೀಯ "ಮ್ಯಾಜಿಸ್ಟ್ರೇಟ್" ಆಗಿ ಪ್ರಸಿದ್ಧಿಗೆ ಬಂದ ವೆಂಬಾಕಂ ರಾಘವಾಚಾರ್ಯರ ಆಶ್ರಯವು ಅವರಿಗೆ ಲಭಿಸಿ, ಆ ಮೂಲಕ ಅವರಿಗೆ ಮದ್ರಾಸು ಪಟ್ಟಣದಲ್ಲಿಯೇ ಉದ್ಯೋಗವಾಯಿತು. ಈ ರೀತಿ ಅನುಕೂಲಗಳು ದೊರೆತ ಕಾರಣ ರಂಗಾಚಾರ್ಯರ ವಿದ್ಯಾಭ್ಯಾಸವು ಚಿಕ್ಕ ವಯಸ್ಸಿನಿಂದಲೂ ಮದ್ರಾಸು ಪಟ್ಟಣದಲ್ಲಿಯೇ ನಡೆದಂತೆ ಕಾಣುತ್ತದೆ.

"ಬೆಳೆಯುವ ಪೈರು ಮೊಳಕೆಯಲ್ಲಿಯೇ" ಎಂಬಂತೆ ರಂಗಾಚಾರ್ಯರ ಬುದ್ಧಿಬಲವು ಅಸಾಧಾರಣವಾದುದೆಂಬುದು ಬಾಲ್ಯದಲ್ಲಿಯೇ ಕಾಣಬರುತ್ತಿತ್ತು. ಹುಡುಗನಾಗಿರುವಾಗ ತಮ್ಮ ಮನೆಯಲ್ಲಿ ದೊಡ್ಡವರು ಚತುರಂಗವಾಡುವುದನ್ನು ನೋಡುತ್ತಿದ್ದ ಮಾತ್ರದಿಂದಲೇ ಅವರು ಆ ಯುಕ್ತಿಪ್ರಧಾನವಾದ ಆಟದಲ್ಲಿ ನಿಪುಣರಾದರೆಂದು ಹೇಳಿಕೆಯುಂಟು. ಮೊದಲು ಅವರು ಪ್ರಸಿದ್ಧವಾದ ಪಚ್ಚೆಯಪ್ಪನ ಪಾಠಶಾಲೆಯನ್ನು ಸೇರಿ, ಅಲ್ಲಿ ಪ್ರಿಯಜ್ಞಾನ ಮೊದಲಿಯಾರ್ ಎಂಬಾತನ ಶಿಷ್ಯರಾಗಿದ್ದರು. ರಂಗಾಚಾರ್ಯರಿಗೆ ಆತನಲ್ಲಿ ವಿಶೇಷ ಭಕ್ತಿಯಿತ್ತು. ಉಪಾಧ್ಯಾಯರಿಗೆಲ್ಲಾ ಆತನ ನಡತೆಯು ಮೇಲು

ಪಂಕ್ತಿಯಾಗಿತ್ತೆಂದು ಅವರು ಅಧಿಕಾರಕ್ಕೆ ಬಂದಮೇಲೆ ಅನೇಕಾವರ್ತಿ ಹೇಳುತ್ತಿದ್ದರಲ್ಲದೆ, ಆತನ ವಾರ್ಧಕ್ಯದಲ್ಲಿ ಜೀವನಕ್ಕಾಗಿ ದ್ರವ್ಯ ಸಹಾಯಮಾಡುತ್ತಿದ್ದರು. ಪಚ್ಚೈಯಪ್ಪನ ಪಾಠಶಾಲೆಯಲ್ಲಿ ವ್ಯಾಸಂಗವು ಮುಗಿದಮೇಲೆ, ೧೮೪೩ರಲ್ಲಿ, ರಂಗಾಚಾರ್ಯರು "ಮದ್ರಾಸು ಹೈ ಸ್ಕೂಲ"ನ್ನು ಸೇರಿದರು. ಅಲ್ಲಿಯ ಮುಖ್ಯೋಪಾಧ್ಯಾಯರಾದ ಇ. ಬಿ. ಪೊವೆಲ್‌ರವರು ರಂಗಾಚಾರ್ಯರ ಚಟುವಟಿಕೆಯಿಂದಲೂ ಬುದ್ಧಿವಿಶೇಷದಿಂದಲೂ ಸುಪ್ರೀತರಾಗಿ, ಅವರಿಗೆ ತಿಂಗಳೊಂದಕ್ಕೆ ರೂ. ೧೪ರಂತೆ ವಿದ್ಯಾರ್ಥಿವೇತನ (ಸ್ಕಾಲರ್‌ಷಿಪ್) ವನ್ನು ಕೊಡಿಸಿದರು. ರಂಗಾಚಾರ್ಯರು ವಿದ್ಯಾತುರರಾಗಿದ್ದರೂ ಪುಸ್ತಕ ಪಿಶಾಚಗ್ರಸ್ತರೇನೂ ಆಗಿರಲಿಲ್ಲ. ಅವರಿಗೆ ಆಟವಾಡುವುದರಲ್ಲಿಯೂ ಬಲು ಶ್ರದ್ಧೆ. ಹಾಗಿದ್ದರೂ, ಅವರ ಬುದ್ಧಿಯೂ ಪ್ರಯತ್ನವೂ ಉತ್ತಮ ವಿಧದವಾದ ಕಾರಣ, ಅವರು ಓದುತ್ತಿದ್ದ ವರ್ಗದ ಪ್ರಥಮ ಸ್ಥಾನವು ಅವರನ್ನೆಂದೂ ಬಿಟ್ಟಿರಲಿಲ್ಲ.

೧೮೪೫–೪೬ರಲ್ಲಿ ಮದ್ರಾಸು ಯೂನಿವರ್ಸಿಟಿಯ (ವಿಶ್ವವಿದ್ಯಾಲಯ) ಅಧಿಕಾರಿಗಳು ಸರಕಾರಕ್ಕೆ ತಾವು ಕಳುಹಿಸಿದ ಐದನೆಯ ವಾರ್ಷಿಕ ವೃತ್ತಾಂತದಲ್ಲಿ, ಹೈ ಸ್ಕೂಲಿನ ಅಧ್ಯಕ್ಷರಾದ ಪೊವೆಲ್‌ರವರು ರಂಗಾಚಾರ್ಯರ ವಿದ್ಯಾಭಿವೃದ್ಧಿಯನ್ನು ಕುರಿತು ತಮಗೆ ಬರೆದಿದ್ದ ಸದಭಿಪ್ರಾಯಗಳನ್ನು ಉಲ್ಲೇಖಿಸಿ, ರಂಗಾಚಾರ್ಯರು ಪರೀಕ್ಷೆಯಲ್ಲಿ ಕೊಟ್ಟಿದ್ದ ಉತ್ತರ ಪತ್ರಗಳನ್ನು ಉದಾಹರಣೆಯಾಗಿ ಪ್ರಕಟಪಡಿಸಿದರು. ಪೊವೆಲ್‌ರವರು ಬರೆದಿದ್ದುದೇನೆಂದರೆ:—

ಮೂರನೆಯ ವರ್ಷದ ತರಗತಿಯಲ್ಲಿ ರಂಗಾಚಾರಿಯು ವಿಶೇಷ ಪ್ರತಿಭೆಯನ್ನು ತೋರಿಸಿದ್ದಾನೆ. ಈ ಹುಡುಗನು ಚರಿತ್ರೆ ಮೊದಲಾದ ಇಂಗ್ಲಿಷ್ ಸಾಹಿತ್ಯ ಭಾಗದ ವಿಷಯಗಳಲ್ಲಿ ಮಾತ್ರವಲ್ಲದೆ ಗಣಿತ ಶಾಸ್ತ್ರಗಳಲ್ಲಿಯೂ ಮೊದಲನೆಯವನಾಗಿರುತ್ತಾನೆ. ಗಣಿತ ಶಾಸ್ತ್ರಗಳಲ್ಲಿ ತನಗಿಂತ ಉತ್ತಮ ತರಗತಿಯವರೊಡನೆಯೂ ಸ್ಪರ್ಧಿಸಿ, ಅವರಲ್ಲನೇಕರನ್ನು ಸೋಲಿಸಿರುತ್ತಾನೆ. ಈತನ ವಿದ್ಯಾಭಿವೃದ್ಧಿಯು ಅತ್ಯಂತ ಶ್ಲಾಘನೀಯವಾಗಿದೆ; ಈತನನ್ನು (ಯೂನಿವರ್ಸಿಟಿಯ) ಕಾರ್ಯನಿರ್ವಾಹಕ ಸಭೆಯ ಗಮನಕ್ಕೆ ತರಲು ನನಗೆ ತುಂಬಾ ಸಂತೋಷವಾಗಿದೆ. ಈತನು ಪರೀಕ್ಷೆಯಲ್ಲಿ ಪ್ರಶ್ನೆಗಳಿಗೆ ಕೊಟ್ಟ ಉತ್ತರಗಳು—ಮುಖ್ಯವಾಗಿ ಈತನ ಇಂಗ್ಲಿಷ್ ಪ್ರಬಂಧವು—ನೋಡತಕ್ಕುವಾಗಿವೆ.

೧೮೪೯ನೆಯ ಇಸ್ವಿ ಏಪ್ರಿಲ್ ತಿಂಗಳಲ್ಲಿ ರಂಗಾಚಾರ್ಯರು (ತಮ್ಮ ೧೯ನೆಯ ವರ್ಷದಲ್ಲಿ) ಮೊದಲನೆಯ "ಪ್ರೊಫಿಷಿಯೆಂಟ್" (ಪ್ರವೀಣ) ಎಂಬ ಪ್ರಶಸ್ತಿಯನ್ನು ಸಂಪಾದಿಸಿದರು. ವಿದ್ಯಾಗುರುಗಳಾದ ಪೊವೆಲ್‌ರವರು ಆಗ ಶಿಷ್ಯನಿಗೆ ಕೊಟ್ಟ ಯೋಗ್ಯತಾಪತ್ರಿಕೆಯಲ್ಲಿ ಆತನ ಗಣಿತಶಾಸ್ತ್ರ ವಿಜ್ಞಾನಶಾಸ್ತ್ರಗಳ ಪಾಂಡಿತ್ಯವನ್ನೂ, ಇಂಗ್ಲಿಷ್ ಭಾಷಾ ಪರಿಚಯವನ್ನೂ, ಪ್ರಬಂಧ ರಚನ ಶಕ್ತಿಯನ್ನೂ ಪ್ರಶಂಸಿಸಿದರಲ್ಲದೆ, ಆತನ ವಿನಯ ಸೌಶೀಲ್ಯಗಳನ್ನೂ ಹೊಗಳಿದರು. ರಂಗಾಚಾರ್ಯರು "ಪ್ರೊಫಿಷಿಯೆಂಟ್"* ಪರೀಕ್ಷೆಗಾಗಿ ಓದಿದ ವಿಷಯಗಳಲ್ಲಿ ಮುಖ್ಯವಾದುವು ಯಾವುವೆಂದರೆ:—

ಇಂಗ್ಲಿಷ್ ವ್ಯಾಕರಣ

ಭೂವಿವರಣೆ

ರೋಂ ಮತ್ತು ಇಂಗ್ಲೆಂಡ್ ದೇಶಗಳ ಸಂಕ್ಷಿಪ್ತ ಚರಿತ್ರೆ

ರಸ್ಸೆಲ್ಸ್ ಎಂಬಾತನ ಆಧುನಿಕ ಯುರೋಪಿನ ಚರಿತ್ರೆ

ಮರ್ರೇ ,, ಇಂಡಿಯಾದೇಶದ ಚರಿತ್ರೆ

ಸ್ಮಿತ್ ,, ಇತಿಹಾಸ ತತ್ತ್ವ ಶಾಸ್ತ್ರ

ನಾರ್ಟನ್ ,, ಮೂಲ ತತ್ತ್ವಗಳು

ಬೇಕನ್ ,, ಪ್ರಬಂಧಾವಳಿ

ಷೇಕ್ಸ್‌ಪಿಯರ್ ಮಹಾಕವಿಯ "ಜ್ಯೂಲಿಯಸ್ ಸೀಸರ್," "ಹ್ಯಾಮ್ಲೆಟ್" ಮತ್ತು ಇತರ ನಾಟಕಗಳ ಭಾಗಗಳು

ಮಾರ್ಸೆಟ್ ಎಂಬಾತನ ಅರ್ಥಶಾಸ್ತ್ರ ವಿಷಯಕ ಸಂವಾದಗಳು

ಆಬೆರ್‌ಕ್ರಾಂಬಿ ,, ಮೇಧಾಶಕ್ತಿ ವಿಷಯಕ ಗ್ರಂಥ

ಗಣಿತ ಶಾಸ್ತ್ರ:—ಅಂಕಗಣಿತ, ಬೀಜಗಣಿತ, (ಯೂಕ್ಲಿಡ್ಡಿನ) ರೇಖಾಗಣಿತ, ತ್ರಿಕೋಣ, ಮಿತಿ, ಕೋಣ ವರ್ತುಲಾಕೃತಿಗಳ ಸ್ವರೂಪ—ಇತ್ಯಾದಿ ಭಾಗಗಳು

ವಿಜ್ಞಾನಶಾಸ್ತ್ರ:—ಖನಿಜಶಾಸ್ತ್ರ, ರಸಾಯನಶಾಸ್ತ್ರ, ಖಗೋಳಶಾಸ್ತ್ರ, ಇತರವಸ್ತುಶಾಸ್ತ್ರಗಳು.

---

* ಆ ಪರೀಕ್ಷೆಯು ಈಗ ಇಲ್ಲ.

ಹೈ ಸ್ಕೂಲಿನ ದ್ವಿತೀಯೋಪಾಧ್ಯಾಯರಾಗಿದ್ದ ಆಡಮ್ ಎ. ಗಾರ್ಡನ್ ಎಂಬವರೂ ರಂಗಾಚಾರ್ಯರಿಗೆ ಒಂದು ಯೋಗ್ಯತಾಪತ್ರಿಕೆಯನ್ನು ಕೊಟ್ಟು, ಅವರ ಚತುರತೆಯನ್ನೂ ವಿದ್ಯೋತ್ಸಾಹವನ್ನೂ ಕೊಂಡಾಡಿ, ಅವರಿಗೆ ಪುರೋಭಿವೃದ್ಧಿಯನ್ನು ಬಯಸಿದರು. ಇದೇ ಸಮಯದಲ್ಲಿ ರಂಗಾಚಾರ್ಯರಿಗೆ ಲಭ್ಯವಾದ ಮತ್ತೊಂದು ಬಹುಮಾನವೂ ಪ್ರಶಂಸಾರ್ಹವಾಗಿದೆ:—ಮದ್ರಾಸ್ ಗವರ್ನರಾಗಿ ಪ್ರಜೋಪಕಾರಿಯಾಗಿದ್ದ ಲಾರ್ಡ್ ಎಲ್ಫಿನ್‌ಸ್ಟನ್ನಿನ ಹೆಸರನ್ನು ಶಾಶ್ವತಗೊಳಿಸಲು, ದೇಶೀಯ ಮಹಾಜನರು ಮದ್ರಾಸ್ ಯೂನಿವರ್ಸಿಟಿಯಲ್ಲಿ ಒಂದು ನಿಧಿಯನ್ನು ಕಲ್ಪಿಸಿ, ಅದರ ಬಡ್ಡಿಯಿಂದ ಒಂದು ಮಾಸಾಶನವೂ ಒಂದು ವಾರ್ಷಿಕ ಪಾರಿತೋಷಿಕವೂ ಶ್ರೇಷ್ಠನಾದ ವಿದ್ಯಾರ್ಥಿಗೆ ದೊರೆಯುವಂತೆ ಏರ್ಪಡಿಸಿದ್ದರು. ೧೮೫೯ರಲ್ಲಿ ಆ ಪಾರಿತೋಷಿಕಕ್ಕಾಗಿ ಸ್ಪರ್ಧಕರು—"ನಾನಾ ಜನಾಂಗಗಳ ಪರಸ್ಪರ ಸಂಸರ್ಗವು ಅವರವರ ಅಭಿವೃದ್ಧಿಯನ್ನು ಯಾವ ಯಾವ ರೀತಿ ವ್ಯತ್ಯಾಸಗೊಳಿಸುವುದು?"—ಎಂಬ ವಿಷಯವನ್ನು ಕುರಿತು ಪ್ರಬಂಧವನ್ನು ಬರೆಯಬೇಕಾಗಿತ್ತು. ಹಾಗೆ ಬರೆದು ಕಳುಹಲ್ಪಟ್ಟ ಪ್ರಬಂಧಗಳಲ್ಲಿ ರಂಗಾಚಾರ್ಯರದೇ ಸರ್ವೋತ್ಕೃಷ್ಟವಾಗಿದ್ದ ಕಾರಣ, ಐದು ಚಿನ್ನದ ಮೊಹರುಗಳ ಪಾರಿತೋಷಿಕವು ಅವರಿಗೆ ದೊರೆಯಿತು.

ರಂಗಾಚಾರ್ಯರ "ಎಲ್ಫಿನ್‌ಸ್ಟನ್" ಪಾರಿತೋಷಿಕ ಪ್ರಯುಕ್ತವಾದ ಉಪನ್ಯಾಸವು ವಿಚಾರಕ್ಕೆ ಅರ್ಹವಾದ ಅನೇಕಾಂಶಗಳನ್ನೊಳಗೊಂಡಿದೆ. ಅದರ ಸಾರಾಂಶವನ್ನಿಲ್ಲಿ ಕೊಡುವೆವು:—

**ಸೃಷ್ಟಿಯಲ್ಲಿ ಮನುಷ್ಯನು ಸರ್ವೋತ್ತಮನು. ಇತರ ಜೀವರಾಶಿಗಳು ಒಂದೇ ರೀತಿಯಲ್ಲಿ ಬದುಕಿ ಸಾಯುತ್ತವೆ. ಅವನಾದರೋ, ಒರಟುತನದಿಂದ ನಾಗರಿಕತೆಗೆ ಬಂದು, ಅದರಲ್ಲಿ ಮುಂದು ಮುಂದಕ್ಕೆ ಹೋಗುತ್ತಿರುತ್ತಾನೆ. ಅವನು ಇತರ ಭೂತಗಳೆಲ್ಲವನ್ನೂ ತನ್ನ ಅಧಿಕಾರಕ್ಕೆ ಒಳಪಡಿಸಿಕೊಳ್ಳುತ್ತಿದ್ದಾನೆ. ಅವನ ವಿವೇಚನಶಕ್ತಿ, ಭಾಷೆ, ಮನೋಭಾವಗಳು—ಇವು ಅವನಲ್ಲಿ ಸಭ್ಯತೆಯನ್ನು, ಎಂದರೆ ಗುಂಪು ಕಟ್ಟಿಕೊಂಡು ಬದುಕುವ ಬುದ್ಧಿಯನ್ನು ಹುಟ್ಟಿಸುತ್ತವೆ. ಅದರಿಂದಲೇ ಮನುಷ್ಯರು ಸಮಾಜಗಳನ್ನೂ ಜನಪದಗಳನ್ನೂ ಏರ್ಪಡಿಸಿಕೊಂಡಿರುವರು. ಒಂದು ಜನಾಂಗಕ್ಕೆ ಸೇರಿರುವ ಅನೇಕ**

ಮನುಷ್ಯರ ಬುದ್ಧಿ ಶಕ್ತಿಗಳು ಒಟ್ಟುಗೂಡಿ ಕೆಲಸಮಾಡುವುದರಿಂದ ಅವರೆಲ್ಲರೂ ಏಳಿಗೆಯನ್ನು ಹೊಂದುವರು. ಹಾಗೆಯೇ ಬೇರೆ ಬೇರೆ ಜನಾಂಗಗಳೆಲ್ಲವೂ ಒಟ್ಟುಗೂಡಿದರೆ ಮನುಷ್ಯ ಲೋಕವೆಲ್ಲಕ್ಕೂ ಲಾಭವುಂಟಾಗುವುದು.

ಒಂದೊಂದು ದೇಶದಲ್ಲಿ ಒಂದೊಂದು ಬಗೆಯ ಸಂಪತ್ತಿರುವುದು. ಆದಕಾರಣ ಎಲ್ಲ ದೇಶಗಳವರೂ ಪರಸ್ಪರ ಸ್ನೇಹ ಬೆಳೆಯಿಸಿದರೆ, ಎಲ್ಲರಿಗೂ ಎಲ್ಲ ಬಗೆಯ ಸಂಪತ್ತುಗಳೂ ಸಿಕ್ಕುವಂತಾಗುವುದು.

ಒಂದೊಂದು ಜನಾಂಗಕ್ಕೆ ಒಂದೊಂದು ಶಾಸ್ತ್ರ ಅಥವಾ ಕಲೆಯಲ್ಲಿ ಬುದ್ಧಿಯು ಪ್ರವೇಶಿಸುವುದು. ಎಲ್ಲ ಜನಾಂಗಗಳವರೂ ಒಬ್ಬರಲ್ಲೊಬ್ಬರು ಸೇರಿದರೆ, ಸರ್ವರೂ ವಿವಿಧವಾದ ವಿದ್ಯೆ ಚಮತ್ಕೃತಿಗಳಲ್ಲಿ ಮುಂದಕ್ಕೆ ಬರಲು ಅವಕಾಶವಾಗುವುದು.

ಒಂದು ದೇಶದವರಿಗೆ ಮತ್ತೊಂದು ದೇಶದವರೊಡನೆ ಸಂಪರ್ಕವು ಮೂರು ತೆರನಾಗಿ ಬೆಳೆಯಬಹುದು: (೧) ವ್ಯಾಪಾರದ ಮೂಲಕ; (೨) ರಾಜ್ಯಾಧಿಕಾರವನ್ನು ಸಂಪಾದಿಸುವುದರ ಮೂಲಕ (ಉದಾಹರಣೆ: ಇಂಗ್ಲಿಷರು ಇಂಡಿಯದಲ್ಲಿ); (೩) ಯುದ್ಧದಲ್ಲಿ ಗೆದ್ದ ಪರದೇಶೀಯರು ಅವರ ದೇಶಕ್ಕೆ ಹಿಂದಿರುಗದೆ ಸೋತವರ ಮಧ್ಯದಲ್ಲಿಯೇ ನೆಲಸುವುದರ ಮೂಲಕ (ಉದಾಹರಣೆ: ಮಹಮ್ಮದೀಯರು ಇಂಡಿಯದಲ್ಲಿ).

ಈ ಸಂಪರ್ಕದ ಪ್ರಯೋಜನಗಳು ಆಯಾ ದೇಶದವರ ನಾಗರಿಕತೆಗೆ ಅನುಸಾರವಾಗಿರುವುವು. (೧ನೆಯ) ವ್ಯಾಪಾರದ ಮೂಲಕ ಉಂಟಾಗುವ ವ್ಯತ್ಯಾಸಗಳು ಸ್ವಲ್ಪ ಸ್ವಲ್ಪವಾಗಿ ನಡೆಯುವುವು. (೩ನೆಯ ಮಾರ್ಗದಲ್ಲಿ) ಒಂದು ದೇಶದವರ ಮಧ್ಯೆ ಮತ್ತೊಂದು ದೇಶದವರು ಬಂದು ಸ್ಥಿರವಾಗಿ ನೆಲಸಿದರೆ, ಅವರಲ್ಲೊಬ್ಬರಿಂದೊಬ್ಬರಿಗೆ ಉತ್ತೇಜನವು ಬಹುಕಾಲ ದೊರೆಯಲಾರದು; ಕೆಲವು ವರ್ಷಗಳಲ್ಲಿಯೇ ಅವರಿಬ್ಬರೂ ಒಂದೇ ಸ್ಥಿತಿಗೆ ಇಳಿಯುವರು. (೨ನೆಯ ಪ್ರಕಾರ) ಪರಸ್ಪರ ಸ್ನೇಹ ಬೆಳೆಯಿಸುವ ದೇಶಗಳು ಸಾಂಕರ್ಯಕ್ಕೆ ದಾರಿಕೊಡದೆ, ತಮ್ಮ ತಮ್ಮ ಪ್ರತ್ಯೇಕ ಭಾವವನ್ನು ಉಳಿಸಿಕೊಂಡು ಬಾಳಿದರೆ, ಅದರ ಪ್ರಯೋಜನಗಳು ಉಭಯರಿಗೂ ಹೆಚ್ಚಾಗಿಯೂ ಬಹುಕಾಲ ನಿಲ್ಲತಕ್ಕವುಗಳಾಗಿಯೂ ಇರುವುವು.

ಒಂದು ದೇಶದ ಅಭ್ಯುದಯಕ್ಕೆ ಮುಖ್ಯ ಲಕ್ಷಣಗಳಾವುವೆಂದರೆ:—ಅಲ್ಲಿಯ ಬಡಜನರು ಅನುಭವಿಸುವ ಸುಖ ಸಂಪತ್ತುಗಳು; ಶಾಸ್ತ್ರ ಕಲೆಗಳಿಗೆ ಅಲ್ಲಿರುವ ಪ್ರಾಚುರ್ಯ; ಜನಸಾಮಾನ್ಯದ ಬುದ್ಧಿ, ಚಮತ್ಕಾರ, ಕಾರ್ಯಶೀಲತೆ—ಇವು.

ಒಂದೊಂದು ದೇಶದವರು ಒಂದೊಂದು ಭಾಗದಲ್ಲಿ ಅನುಕೂಲ್ಯಗಳನ್ನೂ ಸಾಮರ್ಥ್ಯವನ್ನೂ ಪಡೆದಿರುವರಾದಕಾರಣ, ಅನೇಕ ದೇಶಗಳವರು ಒಟ್ಟು ಸೇರಿದರೆ ಒಬ್ಬರಿಂದೊಬ್ಬರು

ಹೊಸ ವಿಷಯಗಳನ್ನು ಸಂಗ್ರಹಿಸಬಹುದು; ನೀತಿಗಳನ್ನು ಕಲಿಯಬಹುದು; ಮತ್ತು ಎಲ್ಲರೂ ಸ್ವಾಹಂಕಾರವನ್ನೂ ಪರಸ್ಪರ ದ್ವೇಷವನ್ನೂ ಬಿಟ್ಟು ಅನ್ಯೋನ್ಯ ಪ್ರಯೋಜಕರಾಗಿ ಬಾಳಬಹುದು.

ಆದರೆ, ಇಂಡಿಯಾದೇಶಕ್ಕೆ ಬ್ರಿಟಿಷರೊಡನೆ ಉಂಟಾಗಿರುವ ಸಂಪರ್ಕದಿಂದ ಇದುವರೆಗೂ ಎಷ್ಟು ಸ್ವಲ್ಪ ಪ್ರಯೋಜನವಾಗಿದೆಯೆಂಬುದನ್ನು ವಿಚಾರಿಸಿದರೆ, ವಿಷಾದವುಂಟಾಗುತ್ತದೆ. ನಮ್ಮ ವ್ಯವಸಾಯ ಕ್ರಮವು ಅನೇಕ ಶತಮಾನಗಳ ಹಿಂದೆ ಇದ್ದಂತೆಯೇ ಇನ್ನೂ ಪ್ರಾಥಮಿಕ ದಶೆಯಲ್ಲಿದೆ. ಮಸ್ಲಿನ್ ಮೊದಲಾದ ಸೂಕ್ಷ್ಮ ವಸ್ತ್ರಗಳನ್ನು ನೆಯ್ಯುವ ಕಲೆಯು ಕ್ಷೀಣಿಸುತ್ತಿದೆ. ಪಾಶ್ಚಾತ್ಯ ವಿದ್ಯಾ ಪ್ರಕಾಶವು ಜನಸಾಮಾನ್ಯಕ್ಕೆ ಇನ್ನೂ ಹರಡಿಲ್ಲ.

ಬ್ರಿಟಿಷ್ ಸರಕಾರವು ಇದುವರೆಗೂ ಯುದ್ಧಗಳಲ್ಲಿ ಪ್ರವೃತ್ತವಾಗಿದ್ದು, ದೇಶವು ಸಂಕ್ಷೋಭೆಯಲ್ಲಿತ್ತಾದ ಕಾರಣ, ಯಾವ ಅಭ್ಯುದಯ ಕಾರ್ಯವೂ ನಡೆಯಲಾರದೆಹೋಯಿತೆಂದು ಹೇಳಬಹುದು. ಈಗಲಾದರೋ, ಸಿಂಧು ನದಿಯಿಂದ ಕನ್ಯಾಕುಮಾರಿಯವರೆಗೂ ಎಲ್ಲ ದೇಶವೂ ಬ್ರಿಟಿಷರದಾಗಿ, ಶಾಂತಿ ಸಮಾಧಾನಗಳು ಎತ್ತೆತ್ತಲೂ ನೆಲಸಿ, ಯುರೋಪ್ ಖಂಡವನ್ನು ಅನಾಗರಿಕತೆಯಿಂದ ನಾಗರಿಕತೆಗೆ ತಂದಂಥಾ ಅಕ್ಷರ ಮುದ್ರಣ ಕಲೆಯು ಈ ದೇಶದಲ್ಲಿಯೂ ಸ್ಥಾಪಿತವಾಗಿರುವುದರಿಂದ, ಇನ್ನು ಮುಂದೆಯಾದರೂ ನಮ್ಮ ಕೃಷಿಯು ಒಳ್ಳೆಯ ಸ್ಥಿತಿಗೆ ಬಂದು, ಕಸಬುಗಳು ಪ್ರಬಲಿಸಿ, ವ್ಯಾಪಾರವು ಹರಡಿ, ಜ್ಞಾನಪ್ರಸಾರವು ಸಮಸ್ತ ಭಾಗಗಳಲ್ಲಿಯೂ ನಡೆದು, ಅದರ ಸತ್ಫಲಗಳು ಎಲ್ಲೆಲ್ಲಿಯೂ ತಲೆದೋರಿಯಾವೆಂದು ನಾವು ನಿರೀಕ್ಷಿಸಬಹುದು.

ಹದಿನೆಂಟು ವರ್ಷದ ಬಾಲಕನು ಬರೆದ ಈ ಪ್ರಬಂಧದಲ್ಲಿ ನಮ್ಮ ಗಮನಕ್ಕೆ ವಿಶೇಷಾರ್ಹವಾದ ಅಂಶಗಳು ಕೆಲವಿವೆ:—

(೧) ನಾನಾ ದೇಶಗಳ ಜನಾಂಗಗಳವರು ಪರಸ್ಪರ ಸಖ್ಯವನ್ನು ಬೆಳೆಸಿ, ವಿದ್ಯೆ ವ್ಯಾಪಾರಗಳ ಮೂಲಕ ಸಂಪರ್ಕವನ್ನಿಟ್ಟುಕೊಳ್ಳಬೇಕು. ಹಾಗೆ ಮಾಡುವುದರಿಂದ ಎಲ್ಲರಿಗೂ ಪ್ರಯೋಜನವುಂಟು. ಹಾಗೆ ಮಾಡದೆ ಕೂಪ ಮಂಡೂಕದಂತೆ ಬೇರೆಯಾಗಿರುವವರು ಹೊಸ ಹೊಸ ಜ್ಞಾನ ಚಮತ್ಕಾರಗಳನ್ನು ಕಲಿಯದೆ ಕ್ಷೀಣ ದಶೆಗೆ ಇಳಿಯುವರು.

(೨) ಅನ್ಯ ದೇಶೀಯ ಸಂಪರ್ಕವು ಹೀಗೆ ಒಳ್ಳೆಯದಾಗಿದ್ದರೂ, ಅದರಲ್ಲಿ ಮೈಮರೆತು ತನ್ನ ವಿಶೇಷ ಗುಣ ಧರ್ಮಗಳನ್ನು ಯಾವ ಜನಾಂಗವೂ ಕಳೆದುಕೊಳ್ಳಬಾರದು.

(೩) ನಮ್ಮ ದೇಶದ ಸಾಮಾನ್ಯ ಜನರಲ್ಲಿ ವಿದ್ಯಾ ಪ್ರಾಚುರ್ಯವು ಹೆಚ್ಚಬೇಕು.

(೪) ಕೃಷಿ ಕೈಗಾರಿಕೆ ಯಂತ್ರಕಾರ್ಯಗಳು ಪ್ರಬಲಿಸಬೇಕು.

(೫) ಮುದ್ರಣ ಕಲೆಯು—ಎಂದರೆ ಗ್ರಂಥಗಳನ್ನೂ ವರ್ತಮಾನ ಪತ್ರಿಕೆಗಳನ್ನೂ ಅಚ್ಚುಮಾಡಿ ಹರಡುವ ಕೆಲಸವು—ನಾಗರಿಕತೆಗೆ ಸಹಕಾರಿಯಾದುದು. ಆದುದರಿಂದ ಪುಸ್ತಕ ಪತ್ರಿಕಾ ಪ್ರಚಾರವು ನಮ್ಮ ದೇಶದಲ್ಲಿ ಹೆಚ್ಚಬೇಕು.

ಎಂಭತ್ತು ವರ್ಷಗಳ ಹಿಂದೆ ಬರೆದ ಈ ಮಾತುಗಳು ಈಗಿಗೂ ತಕ್ಕವುಗಳಾಗಿವೆ. ಈ ಅಂಶಗಳನ್ನು ರಂಗಾಚಾರ್ಯರು ಇತರ ಗ್ರಂಥಗಳಿಂದ ಪ್ರಬಂಧ ರಚನೆಗಾಗಿ ಮಾತ್ರ ಆಯ್ದುಕೊಂಡು, ಆ ಕೆಲಸ ಮುಗಿದ ಬಳಿಕ ಮರೆತು ಬಿಡಲಿಲ್ಲ. ಆ ವಾಕ್ಯಗಳು ಅವರ ಸ್ವಬುದ್ಧಿಯಿಂದಲೂ ಸೂಕ್ಷ್ಮ ವಿಚಾರದಿಂದಲೂ ಹೊರಟವು. ಆ ತತ್ತ್ವಗಳನ್ನೇ ಮುಂದೆ ಅವರು ಅಧಿಕಾರ ಪೀಠದಲ್ಲಿ ಕುಳಿತಾಗ ಅನುಸರಿಸಿದರೆಂಬುದನ್ನು ನಾವು ನೋಡುವೆವು.

---

## ಪರಿಚ್ಛೇದ ೩

## ಮದ್ರಾಸು ಸೀಮೆಯಲ್ಲಿ ಉದ್ಯೋಗ—ಪುಸ್ತಕ ಲೇಖನ—ಸಮುದ್ರಯಾನ

"Let each educated native, then, regard himself as a teacher, either directly or indirectly, of his less fortunate countrymen. As he meets with success in his path of life, and his sphere of influence consequently widens, let him exert himself the most strenuously to secure to others the advantages which have placed him in the position he occupies."

*—E. B. Powell.*

"ವಿದ್ಯಾವಂತನಾದ ಪ್ರತಿಯೊಬ್ಬ ಭಾರತೀಯನೂ ತನಗಿಂತ ಹೀನದಶೆಯಲ್ಲಿರುವ ಸ್ವದೇಶೀಯರಿಗೆ ತಾನು ಪ್ರತ್ಯಕ್ಷವಾಗಿಯೂ ಪರೋಕ್ಷವಾಗಿಯೂ ಗುರುವಿನಂತೆ ಇರ

ಬೇಕಾದವನೆಂದು ಭಾವಿಸಿಕೊಳ್ಳಲಿ. ತನ್ನ ಅಭ್ಯುದಯವು ಹೆಚ್ಚಿ ತನ್ನ ಪ್ರಾಬಲ್ಯವು ವಿಸ್ತರಿಸಿದ ಹಾಗೆಲ್ಲಾ, ತನ್ನನ್ನು ಉನ್ನತಸ್ಥಾನಕ್ಕೆ ತರಲು ಯಾವ ಅನುಕೂಲ್ಯಗಳು ಸಾಧಕವಾದುವೋ ಅದೇ ಅನುಕೂಲ್ಯಗಳನ್ನು ಇತರರಿಗೆ ಸಂಪಾದಿಸಿಕೊಡಲು ಅವನು ಅತ್ಯಂತ ಶ್ರದ್ಧೆಯೊಡನೆ ಪ್ರಯತ್ನಪಡಲಿ.''

—ಪೊವೆಲ್‌ರವರ ಉಪದೇಶ.

ಈ ಉಪದೇಶವನ್ನು ಶಿರಸಾ ವಹಿಸಿದ ರಂಗಾಚಾರ್ಯರಿಗೆ ಸಂಸಾರ ಭಾರವು ಇಲ್ಲದೆ ಇರಲಿಲ್ಲ. ವಿದ್ಯಾರ್ಥಿ ದಶೆಯಲ್ಲಿ ಅವರಿಗೆ ಉಪಪೋಷಕರಾಗಿದ್ದ ಶಿರಸ್ತೆದಾರ್ ವರದಾಚಾರ್ಯರೆಂಬ*ವರು ತಮ್ಮ ಕುವರಿ ಅಲಮೇಲಮ್ಮನವರನ್ನು ಅವರಿಗೆ ಕೊಟ್ಟು, ರಂಗಾಚಾರ್ಯರ ೧೯ನೆಯ ವರ್ಷದಲ್ಲಿಯೇ ವಿವಾಹಮಾಡಿಸಿದ್ದರು. ವಿದ್ಯಾ ವ್ಯಾಸಂಗವು ಮುಗಿದೊಡನೆಯೆ ರಂಗಾಚಾರ್ಯರು ಆಗಿನ ಪದ್ಧತಿಯಂತೆ ಜೀವನಾರ್ಥವಾಗಿ ಸರಕಾರೀ ಉದ್ಯೋಗವನ್ನು ಕೈಗೊಳ್ಳಬೇಕಾಯಿತು.

ಮೇಲೆ ಹೇಳಿದ ''ಎಲ್‌ಫಿನ್‌ಸ್ಟನ್'' ನಿಧಿಯ ಕಾರ್ಯದರ್ಶಿಗಳೂ, ಇತರ ವಿಧದ ವಿದ್ಯಾ ಪ್ರಚಾರ ಕಾರ್ಯಗಳಲ್ಲಿ ಆಸಕ್ತರೂ, ದೇಶೀಯರ ಹಿತಚಿಂತಕರೂ ಆಗಿದ್ದ ಜೆ. ಎನ್. ಟೇಲರ್ ಎಂಬವರು ರಂಗಾಚಾರ್ಯರ ಅಸಾಧಾರಣವಾದ ಮೇಧಾಶಕ್ತಿ, ಕಾರ್ಯೋತ್ಸಾಹ, ದೃಢಪ್ರಯತ್ನ ಮೊದಲಾದವುಗಳನ್ನು ಈ ವೇಳೆಗೆ ಕಂಡುಕೊಂಡಿದ್ದರು. ಅವರ ಅಭಿಮಾನದಿಂದ ರಂಗಾಚಾರ್ಯರು ೧೮೫೦ನೆಯ ಮೇ ೭ರಲ್ಲಿ ಮದ್ರಾಸು ಕಲೆಕ್ಟರವರ ಕಛೇರಿಯಲ್ಲಿ ೩೫ ರೂ. ತಲಬಿನ ಮೇಲೆ ಹುಜೂರು ಡೆಪ್ಯುಟಿ ಅಕೌಂಟೆಂಟ್ (ಲೆಕ್ಕಗಳ ಗುಮಾಸ್ತೆ) ಕೆಲಸಕ್ಕೆ ಬದಲಿಯಾಗಿ ನಿಯಮಿಸಲ್ಪಟ್ಟರು. ಅಲ್ಲಿಗೆ ಸಂತೃಪ್ತರಾಗಿ ರಂಗಾಚಾರ್ಯರು ತಮ್ಮ ಪುಸ್ತಕಗಳನ್ನು ಗಂಟುಕಟ್ಟಿ ಬಿಸುಡಲಿಲ್ಲ. ರಾಜ್ಯಸೇವಕವೃತ್ತಿಗೆ ತಕ್ಕ ಅರ್ಹತೆಯನ್ನು ತೋರಿಸುವ ''ಪಬ್ಲಿಕ್ ಸರ್ವಿಸ್ ಟೆಸ್ಟ್'' ಎಂಬ ಪರೀಕ್ಷೆಗೆ ಅವರು ಸಿದ್ಧರಾಗಿ, ಅದೇ ವರ್ಷ ಉತ್ತೀರ್ಣರಾದರು.

---

* ಸರ್ ಪಿ. ಭಾಷ್ಯಮಯ್ಯಂಗಾರ್‍ಯರ ತಂದೆ.

೧೮೫೦ನೆಯ ಆಗಸ್ಟ್ ೨೦ರಲ್ಲಿ ೧೪ ರೂ. ತಲಬುಳ್ಳ ಅಸಿಸ್ಟೆಂಟು ಮುನಷೀ ಕೆಲಸವು ಚಂಗಲ್ಪಟ್ಟು ಜಿಲ್ಲೆಯ ಕಲೆಕ್ಟರರ ಕಛೇರಿಯಲ್ಲಿ ಅವರಿಗೆ ಕಾಯಂ ಆಗಿ ದೊರೆಯಿತು. ಆ ಬಳಿಕ ಒಂದು ತಿಂಗಳಲ್ಲಿಯೇ ಅವರಿಗೆ ಶಾಲ್ಯಕ್ಕೆ ೫೦ ರೂ. ತಲಬುಳ್ಳ ಇಂಗ್ಲಿಷ್ ರಿಕಾರ್ಡ್-ಕೀಪರ್ (ದಫ್ತರಗಳ ರಕ್ಷಕ) ಕೆಲಸಕ್ಕೆ ವರ್ಗವಾಯಿತು. ಮಾರನೆಯ ವರ್ಷ (೧೮೫೧ನೆಯ ಸೆಪ್ಟೆಂಬರ್ ೧೧) ಪುನಃ ಚಂಗಲ್ಪಟ್ಟಿಗೆ ೭೦ ರೂ. ತಲಬುಳ್ಳ ಡೆಪ್ಯುಟಿ ಅಕೌಂಟೆಂಟ್ ಕೆಲಸಕ್ಕೆ ವರ್ಗವಾಯಿತು. ೧೮೫೨ನೆಯ ಮೇ ತಿಂಗಳಲ್ಲಿ ೮೫ ರೂ. ಸಂಬಳವುಳ್ಳ ಹೆಡ್ ರೈಟರ್ (ಮುಖ್ಯ ಗುಮಾಸ್ತೆ) ಮತ್ತು ಟ್ರಾನ್ಸ್‌ಲೇಟರ್ (ದ್ವಿಭಾಷಿ) ಕೆಲಸಕ್ಕೆ ಬಡ್ತಿ ಆಯಿತು.

೧೮೫೫ನೆಯ ಇಸ್ವಿಯು ಒಂದು ಮುಖ್ಯವಾದ ವರ್ಷ. ಆ ಫೆಬ್ರುವರಿಯಲ್ಲಿ ರಂಗಾಚಾರ್ಯರು ಮತ್ತೊಂದು 'ಪಬ್ಲಿಕ್ ಸರ್ವಿಸ್' ಪರೀಕ್ಷೆಯಲ್ಲಿ ಜಯಶೀಲರಾಗಿ ಪ್ರಥಮ ಸ್ಥಾನದಲ್ಲಿ ನಿಂತು ೫೦೦ ರೂಪಾಯಿಗಳ ಬಹುಮಾನವನ್ನು ಪಡೆದರು. ಅಂದಿಗೆ ಅವರ ವಿದ್ಯಾರ್ಥಿ ದಶೆಯು ಮುಗಿದು ಆರು ವರ್ಷಗಳಾಗಿದ್ದರೂ,ಅವರು ನಾನಾ ಶಾಸ್ತ್ರಭಾಗಗಳನ್ನು ಮರೆಯದೆ ಅವುಗಳಲ್ಲಿ ವಿಶೇಷ ಪರಿಜ್ಞಾನವನ್ನು ತೋರಿಸಿದ್ದುದು ಪರೀಕ್ಷಕರ ಶ್ಲಾಘನೆಗೆ ಕಾರಣವಾಯಿತು. ಮುಂದಿನ ಜುಲೈ ತಿಂಗಳಲ್ಲಿ ಅವರು ಮದ್ರಾಸಿಗೆ ಬಂದು "ಲಾ ಕಾಲೇಜ"ನ್ನು (ನ್ಯಾಯಶಾಸ್ತ್ರ ಶಾಲೆ) ಸೇರಿದರು. ಆದರೆ ಅಲ್ಲಿ ಬಹು ದಿನ ನಿಂತಂತೆ ಕಾಣುವುದಿಲ್ಲ. ೧೮೫೭ನೆಯ ಫೆಬ್ರುವರಿಯಲ್ಲಿ ಅವರು ಸಿವಿಲ್ ಕೋರ್ಟುಗಳ ಪ್ಲೀಡರ್ (ನ್ಯಾಯವಾದಿ) ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದರು. ಲೇಖಣಿ ಹಿಡಿಸಿ ಕೂಡಿಸುವ ಗುಮಾಸ್ತಗಿರಿಗಿಂತಲೂ ಕಾರ್ಯದಕ್ಷತೆಯನ್ನು ಪ್ರಕಾಶಗೊಳಿಸುವ ತಹಶೀಲ್‌ದಾರ್ ಹುದ್ದೆಯು ಅವರ ಪುರೋಭಿವೃದ್ಧಿಗೆ ಹೆಚ್ಚು ಸಾಧಕವೆಂಬುದನ್ನು ಅವರ ಮೇಲಿನ ಅಧಿಕಾರಿಯು ತಿಳಿದು, ಅದಕ್ಕೆ ತಕ್ಕ ಶಿಫಾರಸನ್ನು ಮಾಡಿದ್ದನು. ಅದರಂತೆ ೧೮೫೭ನೆಯ ಮಾರ್ಚಿ ೨ರಲ್ಲಿ ಸೈದಾಪೇಟೆಯ ತಹಶೀಲ್ ದಾರ್ ಕೆಲಸಕ್ಕೆ ರಂಗಾಚಾರ್ಯರು ನಿಯಮಿಸಲ್ಪಟ್ಟರು.

ಈ ಸಮಯದಲ್ಲಿ ಎರಡು ಮೂರು ಮಹತ್ತ್ವದ ಸಂಗತಿಗಳು ಜರುಗಿದವು. ಇದುವರೆಗೆ ಅವರು ಸರಕಾರದ ಆಡಳಿತದಲ್ಲಿ ಒಳಹೊಕ್ಕು, ಅದರ ನ್ಯೂನಾತಿರಿಕ್ತಗಳನ್ನು ಚೆನ್ನಾಗಿ ತಿಳಿದುಕೊಂಡಿದ್ದರು. ಅದರ ಫಲಿತಾಂಶರೂಪವಾಗಿ, (೧) ರೆವಿನ್ಯೂ ಉದ್ಯೋಗಸ್ಥರು ಲಂಚ ರುಷ್ವತ್ತುಗಳಿಗೆ ಕೈಚಾಚುತ್ತಿದ್ದ ಅನ್ಯಾಯವನ್ನೂ, (೨) ಚಂಗಲ್ಪಟ್ಟು ಮತ್ತು ತಂಜಾವೂರು ಜಿಲ್ಲೆಗಳಲ್ಲಿಯ ಮಿರಾಶಿ ಹಕ್ಕುಗಳ ವ್ಯವಸ್ಥೆಯನ್ನೂ ಕುರಿತು, ರಂಗಾಚಾರ್ಯರು ಎರಡು ಸಣ್ಣ ಪುಸ್ತಕಗಳನ್ನು ಬರೆದು, ತಮ್ಮ ಹೆಸರು ಹಾಕದೆ, ಪ್ರಕಟಿಸಿದರು. ಈಗಿಗೆ ರಂಗಾಚಾರ್ಯರಿಗೆ ೨೫ ವರ್ಷ ವಯಸ್ಸಾಗಿತ್ತು. ಆಗ ಮದ್ರಾಸು ಸರಕಾರದಲ್ಲಿ ದೊಡ್ಡ ಹುದ್ದೇದಾರರಾಗಿದ್ದ ಜಿ. ಎನ್. ಟೇಲರ್ ಮುಂತಾದವರ ತಿಳುವಳಿಕೆಗಾಗಿ ಅವರು ಈ ಪುಸ್ತಕಗಳನ್ನು ಬರೆದರೇ ಹೊರತು ಸ್ವಪ್ರತಿಷ್ಠೆಗಾಗಿ ಅಲ್ಲ. ಅವುಗಳಲ್ಲಿ ಎರಡನೆಯದು ಅಷ್ಟು ಪ್ರಕೃತೋಪಯೋಗಿಯಲ್ಲ. ಮೊದಲನೆಯದು ಈಗಿಗೂ ತುಂಬಾ ಉಪಯುಕ್ತವಾದುದಾಗಿದೆ. ''ಬ್ರೈಬರಿ'' ಅಥವಾ ''ಲಂಚ'' ಎಂಬ ಹೆಸರುಳ್ಳ ಆ ಲೇಖನದಲ್ಲಿ, ದೇಶೀಯ ಅಧಿಕಾರಿಗಳು ನಡೆಸುತ್ತಿದ್ದ ಅನ್ಯಾಯಗಳನ್ನೂ ಅಕ್ರಮಗಳನ್ನೂ ರಂಗಾಚಾರ್ಯರು ನಿರ್ದಾಕ್ಷಿಣ್ಯವಾಗಿ ಹೊರಹಾಕಿದರು. ರೆವಿನ್ಯೂ ಇಲಾಖೆಯ ಅನೇಕ ಬಾಬುಗಳನ್ನೂ, ಆಯಾ ಬಾಬುಗಳಲ್ಲಿ ಯಾವ ಯಾವ ರೀತಿಯಲ್ಲಿ ಅಧಿಕಾರಿಗಳು ಲಂಚ ತಿನ್ನುತ್ತಿದ್ದರೆಂಬುದನ್ನೂ, ಅದರಿಂದ ನ್ಯಾಯವಿಮರ್ಶೆಯೂ ಜನರ ನಡೆವಳಿಕೆಯೂ ಸಹ ಹೇಗೆ ಕೆಡುತ್ತಿತ್ತೆಂಬುದನ್ನೂ, ಅದನ್ನು ಹೇಗೆ ಹೋಗಲಾಡಿಸಿ ಆಡಳಿತವನ್ನು ಕ್ರಮಪಡಿಸಬಹುದೆಂಬುದನ್ನೂ ವಿವರಿಸಿ ಆ ಪ್ರಬಂಧದಲ್ಲಿ ಬರೆದಿರುವರು. ಅವರ ಆಕ್ಷೇಪಣೆಗೆ ಸಿಕ್ಕಿದ್ದವರಲ್ಲಿ ಅವರ ಸಮೀಪ ಬಂಧುಗಳೂ ಕೆಲಮಂದಿ ಇದ್ದರಂತೆ. ರಾಜ್ಯಭಾರದ ಕ್ರಮಕ್ಕೂ ಅಧಿಕಾರಸ್ಥರ ಅಂತರಂಗ ವರ್ತನೆಗೂ ಇರುವ ಸಂಬಂಧವು ಆ ಪುಸ್ತಕದಲ್ಲಿ ಸ್ಪಷ್ಟವಾಗಿ ಚರ್ಚಿಸಲ್ಪಟ್ಟಿದೆ. ಅದರಿಂದ ಕುಪಿತರಾದವರು ಆ ಪುಸ್ತಕದ ಲೇಖಕನು ಹೆಸರು ಕೊಡಲಿಲ್ಲವೆಂಬ ನೆವದಿಂದ ಅದನ್ನು ಖಂಡಿಸುತ್ತಿರಲು, ರಂಗಾಚಾರ್ಯರು ಧೈರ್ಯದಿಂದ ಮುಂದೆ

ಬಂದು, ಅದನ್ನು ಬರೆದವರು ತಾವೇ ಎಂದು ನಿಂತು, ತಾವು ಬರೆದಿದ್ದ ವಿಷಯಗಳನ್ನು ಸಮರ್ಥಿಸಿದರು. ಈ ಕಾರಣದಿಂದ ಅನೇಕ ಮಂದಿ ನೀತಿವಿಹೀನರಿಗೆ ಅವರಲ್ಲಿ ದ್ವೇಷಾಸೂಯೆಗಳು ಹುಟ್ಟಿದುವು.

ಆ ಪುಸ್ತಕದ ಮುಖ್ಯಾಂಶಗಳನ್ನೀರೀತಿ ಸಂಕ್ಷೇಪವಾಗಿ ತಿಳಿಸಬಹುದು :—

ಲಂಚವು ಪ್ರಬಲವಾಗಿರುವುದಕ್ಕೆ—(೧) ಅಲ್ಪವೇತನ, (೨) ವಿದ್ಯಾವಂತರೂ ಗುಣಾಢ್ಯರೂ ಆದ ಜನರು ಅಧಿಕಾರಿ ವರ್ಗದಲ್ಲಿ ತಕ್ಕಷ್ಟು ಮಂದಿ ಇಲ್ಲದಿರುವಿಕೆ, (೩) ಇಲಾಖೆಯ ಕಾರ್ಯಕ್ರಮದ ದೋಷಗಳು, (೪) ದೊಡ್ಡ ಅಧಿಕಾರಿಗಳ ವಿಚಾರಶೂನ್ಯತೆ—ಇವು ಮುಖ್ಯ ಕಾರಣಗಳು.

ಅಧಿಕಾರಿಗಳು ಲಂಚಕೋರರಾಗಿದ್ದರೆ, ಸರಕಾರದ ಕ್ರಮವೇ ಉಚಿತ ರೀತಿಯಲ್ಲಿಲ್ಲವೆಂದು ಅರ್ಥವಾಗುವುದು. ರಾಜ್ಯಪರಿಪಾಲನ ಕ್ರಮದಲ್ಲಿ ವಿಚಕ್ಷಣೆಯಿದ್ದರೆ ಲಂಚ ತೆಗೆಯುವವರಿಗೆ ಅವಕಾಶವೇ ದೊರೆಯದು.

ಲಂಚವು ಕೊಟ್ಟು ತೆಗೆಯುವವರಿಬ್ಬರ ನಡೆವಳಿಕೆಯನ್ನು ಮಾತ್ರವಲ್ಲದೆ ಜನಸಾಮಾನ್ಯದ ಪ್ರಾಮಾಣಿಕತೆಯನ್ನೂ ನ್ಯಾಯಪರತೆಯನ್ನೂ ಕೆಡಿಸುತ್ತದೆ.

ರಾಜದ್ರೋಹ ಪ್ರಜಾದ್ರೋಹಗಳೆರಡಕ್ಕೂ ಆಕರವಾದ ಲಂಚಕೋರತನವು ಹೋಗಬೇಕಾದರೆ,—

(೧) ಸರಕಾರೀ ಕೆಲಸಗಳಿಗೆ ಜನರನ್ನು ಆರಿಸುವಾಗ ಅವರ ಯೋಗ್ಯತಾ ಪರೀಕ್ಷೆಯನ್ನು ಮಾಡಬೇಕು. ಜಾತಿಪಕ್ಷಪಾತ ಮತಪಕ್ಷಪಾತಗಳನ್ನು ಬಿಟ್ಟಿರಬೇಕು.

(೨) ಪ್ರೊಮೋಷನ್ ಅಥವಾ ವೇತನ ವೃದ್ಧಿಯನ್ನು ಕೊಡುವ ಸಂದರ್ಭದಲ್ಲಿ ಜನರು ಹಿಂದಿನ ಕೆಲಸಗಳಲ್ಲಿ ತೋರಿಸಿದ ಮೆಹನತ್ತು, ಪ್ರಾಮಾಣಿಕತೆ, ಔದಾಸೀನ್ಯ ಅಥವಾ ಅವಿವೇಕಿತೆ—ಇವುಗಳನ್ನು ವಿಚಾರಿಸಿ, ಅದಕ್ಕೆ ತಕ್ಕಂತೆ ನಡೆಯಬೇಕು.

(೩) ಅಧಿಕಾರಿಗಳನ್ನು ಸ್ಥಳದಿಂದ ಸ್ಥಳಕ್ಕೆ ವ್ಯರ್ಥವಾಗಿ ವರ್ಗಾಯಿಸಬಾರದು ; ನಿಷ್ಕಾರಣವಾಗಿ ಹಿಂಸಿಸಬಾರದು.

(೪) ಕೆಲಸವು ಸಮರ್ಪಕವಾಗಿದ್ದಲ್ಲಿ, ಅವರಿಗೆ ವೇತನ ವೃದ್ಧಿಯು ನಿರಾತಂಕವಾಗಿ ದೊರೆಯುವಂತಿರಬೇಕು. ಬಹುಕಾಲವಾದರೂ ಆದಾಯವು ಹೆಚ್ಚಾಗದಿದ್ದರೆ ಎಂತಹವರಿಗೂ ಬೇಸರ ಅತೃಪ್ತಿಗಳು ಹುಟ್ಟುವುದು ಸ್ವಾಭಾವಿಕ.

(೫) ಮೇಲಣ ಅಧಿಕಾರಿಗಳು ತಮ್ಮ ಮುನಷಿ ಗುಮಾಸ್ತರುಗಳು ಹೇಳಿದಂತೆ ನಡೆದುಕೊಳ್ಳುವವರಾಗದೆ, ಸ್ವತಃ ಕಾಗದ ಪತ್ರಗಳನ್ನು ಪರಾಮರ್ಶಿಸಿ, ಆಡಳಿತಗಳಲ್ಲಿ ಸೂಕ್ಷ್ಮದೃಷ್ಟಿಯನ್ನಿರಿಸಬೇಕು. ಅವರು ಕೈಕೆಳಗಿನವರ ಅಧೀನರಾದರೆ, ಆ ಕೀಳ್ತರದ ಜನರು ಲಂಚಕ್ಕೆ ಒಳಗಾಗುವುದು ಆಶ್ಚರ್ಯವಲ್ಲ.

(೬) ಎಲ್ಲಕ್ಕಿಂತ ಹೆಚ್ಚಾಗಿ, ಪ್ರಜೆಗಳು—ಎಂದರೆ ಅವರ ಮುಖಂಡರು—ರಾಜ್ಯದ ಯೋಗಕ್ಷೇಮಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಸರ್ವದಾ ಲಕ್ಷ್ಯದಲ್ಲಿರಿಸಿ, ತಮ್ಮ ಅಭಿಪ್ರಾಯಗಳನ್ನು ಸಭೆ ವೃತ್ತಪತ್ರಿಕೆಗಳ ಮೂಲಕ ಪ್ರಕಟಗೊಳಿಸಿ, ಅಧಿಕಾರಿಗಳ ನಡೆವಳಿಕೆಗಳ ವಿಷಯದಲ್ಲಿ ನಿಗ್ರಹಾನುಗ್ರಹಗಳನ್ನು ಪದೇ ಪದೇ ತೋರಬೇಕು. ಹಾಗಾದ ಹೊರತು ರಾಜ್ಯ ವ್ಯವಸ್ಥೆಯು ಸರಿಯಾಗಿರಲಾರದು.

ಈ ಅಭಿಪ್ರಾಯಗಳನ್ನೇ ರಂಗಾಚಾರ್ಯರು ಮುಂದೆ ಮೈಸೂರಿನ ದಿವಾನರಾದಾಗ ಆಚರಣೆಯಲ್ಲಿ ತೋರಿಸಿ, ರಾಜ್ಯಾಧಿಕಾರಿಗಳ ನಡತೆಯನ್ನು ಶುದ್ಧಪಡಿಸಿ ಉತ್ತಮಗೊಳಿಸಿದರು. ರಂಗಾಚಾರ್ಯರ ನ್ಯಾಯಪರತೆಯನ್ನೂ ಅವರ ಪ್ರಜೋಪಕಾರಕ ಬುದ್ಧಿಯನ್ನೂ ಕುರಿತು ಮುಂದೆ ಮಾತನಾಡುವಾಗ ಈ ಪುಸ್ತಕದ ವಿಷಯವನ್ನು ಪುನಃ ಪ್ರಸ್ತಾಪಿಸುವೆವು.

ರಂಗಾಚಾರ್ಯರಿಗೆ ದೇಶದ ಸಂಪದಭಿವೃದ್ಧಿಯ ವಿಷಯದಲ್ಲಿದ್ದ ಉತ್ಸಾಹದ ಸೂಚನೆಯನ್ನು ಆಗಲೇ ನೋಡಿರುವೆವು. ಅವರು ವ್ಯವಸಾಯ ಕೈಗಾರಿಕೆಗಳ ಅಭಿವೃದ್ಧಿಗಾಗಿ ತಮಗೆ ಸಾಧ್ಯವಾದಷ್ಟು ಮಟ್ಟಿಗೆ ಹೊಸ ಹೊಸ ಪರೀಕ್ಷೆ ಪ್ರಯತ್ನಗಳನ್ನು ನಡೆಸುತ್ತಿದ್ದರು. ೧೮೫೬ನೆಯ ಏಪ್ರಿಲ್ ತಿಂಗಳಲ್ಲಿ ಚಂಗಲ್ಪಟ್ಟಿನಲ್ಲಿ ಆದ ವ್ಯವಸಾಯ ವಸ್ತುಪ್ರದರ್ಶನಕ್ಕೆ ಅವರು ಕಳುಹಿಸಿದ್ದ ಭತ್ತದ ಮಾದರಿಗಳು ಅತ್ಯುತ್ತಮವೆನಿಸಿ, ೨೦ ರೂ. ಗಳ ಬಹುಮಾನವು ಅವರಿಗೆ ದೊರಕಿತು. ಇದೂ ನಾವು ಜ್ಞಾಪಕದಲ್ಲಿಡಬೇಕಾದ ಸಂಗತಿ.

ಅದೇ ವರ್ಷ ಆಗಸ್ಟು ತಿಂಗಳಲ್ಲಿ, ಮದರಾಸು ಸೀಮೆಯ ತಹಶೀಲ್ದಾರರುಗಳು ರೆವಿನ್ಯೂ ವಸೂಲಾತಿಯ ವಿಷಯದಲ್ಲಿ ತಕ್ಕಷ್ಟು ಮುತವರ್ಜಿ ವಹಿಸಲಿಲ್ಲವೆಂದು ಸರಕಾರದವರು ಒಂದು ಆಕ್ಷೇಪಣಾಪತ್ರವನ್ನು ಬರೆದು ಇತರರಿಗೆ ಕಳುಹಿಸಿದ್ದಂತೆಯೇ ರಂಗಾಚಾರ್ಯರಿಗೂ

ಕಳುಹಿಸಿದ್ದರು. ಆದರೆ ಇವರು ಅದನ್ನೊಪ್ಪಿಕೊಳ್ಳದೆ, ತಾವು ಸೈದಾಪೇಟೆಯ ತಾಲ್ಲೂಕಿನಲ್ಲಿ ಮಾಡಿದ್ದ ಮೆಹನತ್ತನ್ನು ವಿವರಿಸಿ ಪ್ರತ್ಯುತ್ತರ ಬರೆಯಲು, ಅದನ್ನು ಮೇಲಣ ಅಧಿಕಾರಿಗಳು ಅಂಗೀಕರಿಸಿ, ಅವರ ವಿಷಯದಲ್ಲಿ ತಮ್ಮ ತೃಪ್ತತೆಯನ್ನು ವ್ಯಕ್ತಪಡಿಸಿದರು.

೧೮೫೭ನೆಯ ಏಪ್ರಿಲ್ ತಿಂಗಳಲ್ಲಿ ರಂಗಾಚಾರ್ಯರು ಪುನಃ "ಲಾ" ವ್ಯಾಸಂಗಮಾಡಲು ಪ್ರಯತ್ನಿಸಿದಂತೆಯೂ, ಸುಮಾರು ಅದೇ ಕಾಲದಲ್ಲಿ ಅವರು " ಕಂಟೋನ್ಮೆಂಟ್ " (ಸೈನ್ಯ ಕ್ಷೇತ್ರ) ಗಳ ಆಡಳಿತ ವನ್ನು ಕುರಿತು ಒಂದು ಅತ್ಯುಪಯುಕ್ತವಾದ ಲೇಖನವನ್ನು ಬರೆದಿದ್ದಂತೆಯೂ ಗೊತ್ತಾಗುತ್ತದೆ.

ಅದೇ ವರ್ಷ ಜುಲೈ ತಿಂಗಳಲ್ಲಿ ಟೇಲರ್ ಸಾಹೇಬರವರು ಅವರಿಗೆ ೧೭೫ ರೂ. ಸಂಬಳದ ಮೇಲೆ ನೆಲ್ಲೂರಿನ ನಾಯಬ್ ಶಿರಸ್ತೆದಾರ್ ಕೆಲಸವನ್ನು ಮಾಡಿಸಿಕೊಟ್ಟರು. ಅಲ್ಲಿಂದ ೧೮೫೯ನೆಯ ಮಾರ್ಚಿಯಲ್ಲಿ ರಾಜಮಹೇಂದ್ರಕ್ಕೆ ಡೆಪ್ಯುಟಿ ಕಲೆಕ್ಟರ್ ಕೆಲಸಕ್ಕೆ ವರ್ಗವಾಯಿತು. ಕೆಲವು ವಾರಗಳ ತರುವಾಯ, ಆ ವೇಳೆಗೆ ಮದ್ರಾಸು ಸೀಮೆಯ ಇನಾಂ-ಕಮಿಷನ್ನಿನ ಪ್ರೆಸಿಡೆಂಟರಾದ ಟೇಲರವರು, ತಮ್ಮ ವಿಶ್ವಾಸ ಪಾತ್ರರಾದ ರಂಗಾಚಾರ್ಯರನ್ನು ತಮ್ಮ ಸ್ವಂತ ಸಹಾಯಕ (ಅಸಿಸ್ಟೆಂಟ್)ರನ್ನಾಗಿ ನಿಯಮಿಸಿಕೊಂಡರು. ಇದರಿಂದ ಅವರಿಗೆ ೬೦೦ ರೂ. ವೇತನವೂ, ೧೦೦ ರೂ. ಉಪವೇತನವೂ (ಅಲೋಯನ್ಸ್) ದೊರೆಯುವಂತಾಯಿತು. ಇನಾಂತಿಗಳಾದ ಗ್ರಾಮ ಭೂಮಿಗಳ ವಿದ್ಯಮಾನಗಳನ್ನು ವಿಚಾರಿಸಿ, ಇನಾಂದಾರರಿಗೂ ಸರಕಾರಕ್ಕೂ ಇರ ತಕ್ಕ ಹಕ್ಕು ಬಾಧ್ಯತೆಗಳನ್ನು ವ್ಯವಸ್ಥೆಗೊಳಿಸಲು ಏರ್ಪಾಟಾದ ಸಭೆ (ಕಮಿಷನ್)ಗಳಲ್ಲಿ ಈ ಮದರಾಸು ಪ್ರಾಂತದ ಸಭೆಯೇ ಇಂಡಿಯಾ ದೇಶದಲ್ಲೆಲ್ಲಾ ಮೊದಲನೆಯದು. ಅದರ ಕೆಲಸವು ಕಷ್ಟವಾದುದಾಗಿಯೂ ಬಹು ಜವಾಬ್ದಾರಿಯುಳ್ಳದಾಗಿಯೂ ಇತ್ತು. ಅದನ್ನು ನೆರವೇರಿಸುವುದರಲ್ಲಿ ರಂಗಾಚಾರ್ಯರ ಬುದ್ಧಿಕುಶಲತೆಯೂ ಪರಿಶ್ರಮವೂ ಬಹುಮಟ್ಟಿಗೆ ಮೆಚ್ಚುಗೆಯನ್ನು ಸಂಪಾದಿಸಿದುವು.

ಏಳು ವರ್ಷಗಳಾದ ಬಳಿಕ (೧೮೬೪ನೆಯ ಜೂನ್) ಟೇಲರವರು ಇಂಡಿಯಾದೇಶದ ರೈಲುಗಳ ಸ್ಥಿತಿಯನ್ನು ವಿಚಾರಿಸಲು ನಿಯಮಿಸಲ್ಪಟ್ಟಾಗ, ಅವರು ತಮ್ಮ ಸಹೋದ್ಯೋಗಿಯಾಗಿರಲು (೯೦೦ ರೂ. ಸಂಬಳದ ಮೇಲೆ) ರಂಗಾಚಾರ್ಯರನ್ನೇ ಚುನಾಯಿಸಿದರು.

ಆಚಾರ್ಯರು ಅವರೊಡನೆ ಕಲ್ಕತ್ತೆಗೆ ಸಮುದ್ರ ಮಾರ್ಗದಿಂದ ಹೋಗಬೇಕಾಗಿ ಬಂದಿತು. ಸಮುದ್ರಯಾನವು ಬ್ರಾಹ್ಮಣರಿಗೆ ನಿಷಿದ್ಧವೆಂದು ಶಾಸ್ತ್ರಗಳು ಹೇಳುತ್ತಿರುವಲ್ಲಿ, ರಂಗಾಚಾರ್ಯರು ಆ ಕೆಲಸವನ್ನು ಮಾಡಕೂಡದೆಂದು ಅವರ ಬಂಧು ಮಿತ್ರರು ಬಹುವಾಗಿ ಮುಷ್ಕರ ಹಿಡಿದರು. ಆದರೂ ಅವರು ಬಹಿಷ್ಕಾರಕ್ಕೆ ಹೆದರದೆ, ಸಮುದ್ರಯಾನದಿಂದ ತಮ್ಮ ಸದಾಚಾರಕ್ಕೆ ಯಾವ ಭಂಗವೂ ಬರಲಾರದೆಂದು ನಿಶ್ಚಯಿಸಿ, ಟೇಲರವರೊಡನೆ ಕಲ್ಕತ್ತೆಗೆ ಹೋಗಿಬಂದರು. ಈ ಬಗೆಯ ವಿಚಾರಪರತೆಯು ನಮ್ಮ ದೇಶೀಯರಲ್ಲಿ ಇಂದಿಗೂ ಉಂಟಾಗಿಲ್ಲ. ಶಾಸ್ತ್ರಗಳಲ್ಲಿ ಹೇಳಿರುವ ವಿಧಿಗಳಿಗೆ ಕಾರಣವೇನು? ಅವುಗಳ ಗೂಢಾರ್ಥವೇನು? ಉದ್ದೇಶ್ಯವೇನು?—ಎಂಬುದನ್ನು ವಿಚಾರಿಸದೆ ನಮ್ಮವರನೇಕರು ಈಗಲೂ ಮೂಢಾಚಾರಪರರಾಗಿರುವರು. ಸಮುದ್ರಯಾನಮಾಡಿ, ದೇಶಾಂತರಗಳಿಗೆ ಹೋಗಿ, ಅಲ್ಲಿಂದ ಹೊಸಹೊಸ ವಿಷಯಗಳನ್ನು ಕಲಿತುಕೊಂಡು ಬಾರದಿದ್ದರೆ, ನಮ್ಮ ದೇಶವು ಉನ್ನತ ಸ್ಥಿತಿಗೆ ಬರಲಾಗುವುದಿಲ್ಲವೆಂದೂ, ಹಡಗಿನಲ್ಲಿ ಕೂತ ಮಾತ್ರದಿಂದ ದೈವಭಕ್ತಿಯೂ ಸದ್ಗುಣಗಳೂ ಕೆಡಲಾರವೆಂದೂ ರಂಗಾಚಾರ್ಯರು ಆ ಕಾಲದಲ್ಲಿ ನಿಶ್ಚಯ ಮಾಡಿ, ಅದರಂತೆ ನಡೆದುದು ಅವರ ವಿಚಾರಶೀಲತೆಯನ್ನು ವ್ಯಕ್ತಪಡಿಸುತ್ತದೆ.* ಅವರ ದೈವ ಭಕ್ತಿಯೂ ಸ್ವಧರ್ಮ ಶ್ರದ್ಧೆಯೂ ನಿಜವಾದವು, ಮನಃಪೂರ್ವಕವಾದವು. ಇಂತಹವರು ಜಹಜಿನಲ್ಲಿ ಪ್ರಯಾಣಮಾಡಿದುದರಿಂದಲೇ ಆ ಕಾರ್ಯವು ನಿರಾಕ್ಷೇಪಣೀಯವಾದುದೆಂಬುದು ತೀರ್ಮಾನವಾಗುತ್ತದೆ. ಮೂರ್ಖ ವಚನಗಳಿಗೆ

---

* ೩೩ನೆಯ ಪುಟದಲ್ಲಿಯ ವಿಷಯವು ಈ ಸಂದರ್ಭಕ್ಕೆ ಚೆನ್ನಾಗಿ ಅನ್ವಯಿಸುವುದಾಗಿದೆ.

ಹೆದರಿ ಅವರು ಹಾಗೆ ಮಾಡದೆ ಇದ್ದಿದ್ದರೆ ಅವರು ನಿಜವಾಗಿ ದೊಡ್ಡವ ರಾಗುತ್ತಲೇ ಇರಲಿಲ್ಲ.

ರಂಗಾಚಾರ್ಯರ ದೊಡ್ಡ ಅಧಿಕಾರಕ್ಕೆ ಹೆದರಿಯಾಗಲಿ ಅವರ ಭಾರೀ ಸಂಬಳಕ್ಕೆ ಬೆರಗಾಗಿಯಾಗಲಿ ಅವರ ವೈದಿಕ ಬಂಧುಗಳು ಅವರಿಗೆ ಪ್ರಾಯಶ್ಚಿತ್ತವನ್ನು ವಿಧಿಸದೆ ಬಿಡಲಿಲ್ಲ. ಅವರು ಕಲ್ಕತ್ತೆ ಯಿಂದ ಹಿಂದಿರುಗಿ ಬಂದಮೇಲೆ ಕೆಲವು ಕಾಲ ವೈದಿಕ ಸಮಾಜದವರು ಅವರಿಗೆ ಕೊಡುತ್ತಿದ್ದ ಹಿಂಸೆಯನ್ನು ರಂಗಾಚಾರ್ಯರ ಸಹಧರ್ಮಿಣಿ ಅಲಮೇಲಮ್ಮನವರು ಆಗಾಗ ನೆನೆದುಕೊಂಡು ವರ್ಣಿಸುತ್ತಿದ್ದರು. ರಂಗಾಚಾರ್ಯರು ಎಂತಹ ದೃಢವ್ರತರು ಮತ್ತು ಪರಿಶುದ್ಧವೃತ್ತರು ಎಂಬುದು ಕ್ರಮೇಣ ವೈದಿಕ ವರ್ಗದ ಮನಸ್ಸಿಗೆ ಬಂದು, ಅವರ ವಿಷಯದಲ್ಲಿ ಸಮಾಜಕ್ಕಿದ್ದ ಅಸಮಾಧಾನವು ತೊಲಗಿ, ಗೌರವವು ಹೆಚ್ಚಾಯಿತು.

ರೆಯಿಲ್ವೇ ಕಮಿಷನ್ನಿನಲ್ಲಿ ರಂಗಾಚಾರ್ಯರು ಮಾಡಿದ ಕೆಲಸ ವನ್ನು ಟೇಲರವರು ಮಾತ್ರವಲ್ಲದೆ, ಸರ್ ಚಾರ್ಲ್ಸ್ ಟ್ರೆವೆಲ್ಯನ್ ಮುಂತಾದ ದೊಡ್ಡ ಅಧಿಕಾರಿಗಳೂ ಬಹುವಾಗಿ ಮೆಚ್ಚಿದರು. ಉತ್ತರ ದೇಶ ಪ್ರಯಾಣವಾದ ಒಳಿಕ, ಅದೇ ಕೆಲಸದ ಮೇಲೆ, ಪಶ್ಚಿಮ ದೇಶವಾದ ಬೊಂಬಾಯಿ ಪ್ರಾಂತಕ್ಕೂ ರಂಗಾಚಾರ್ಯರು ಪ್ರಯಾಣ ಮಾಡಬೇಕಾಯಿತು.

೧೮೬೪ನೆಯ ನೊವೆಂಬರ್ ೧೫ರಲ್ಲಿ ರಂಗಾಚಾರ್ಯರು ೬೦೦ ರಿಂದ ೮೦೦ ರೂ. ವರೆಗೂ ವೇತನವುಳ್ಳ ಟ್ರೆಜರಿ ಡೆಪ್ಯುಟಿ ಕಲೆಕ್ಟರ್ ಕೆಲಸಕ್ಕೆ ಮಲಬಾರ್ ಪ್ರಾಂತದ ಮುಖ್ಯ ಸ್ಥಾನವಾದ ಕಲ್ಲೀಕೋಟೆಗೆ ಕಳುಹಿಸಲ್ಪಟ್ಟರು. ೧೮೬೬-೬೭ರಲ್ಲಿ ಅವರು ಬರೆದುಕೊಂಡಿದ್ದ ಒಂದು ಅರ್ಜಿಗೆ ಜವಾಬುಕೊಡುವ ಸಂದರ್ಭದಲ್ಲಿ ಮದ್ರಾಸು ಗವರ್ನರವರು ರಂಗಾಚಾರ್ಯರ ಸಾಮರ್ಥ್ಯವನ್ನೂ ಕರ್ತವ್ಯನಿಷ್ಠೆಯನ್ನೂ ಪ್ರಶಂಸಿ ಸಿದರು. ಕಲ್ಲೀಕೋಟೆಯಲ್ಲಿ ೧೮೬೭ನೆಯ ಮಾರ್ಚಿ ತಿಂಗಳಲ್ಲಿ ಒಂದು ವಿವಿಧ-ವಸ್ತು-ಪ್ರದರ್ಶನವು ನಡೆಯಿತು. ಅದಕ್ಕೆ ರಂಗಾಚಾರ್ಯರು ಕಳುಹಿಸಿದ್ದ ಕೃಷಿ ಕೈಗಾರಿಕೆಗಳ ಪದಾರ್ಥಗಳ ಮಾದರಿಗಳಿಗಾಗಿ

ಅವರಿಗೆ ಒಂದು ಬಹುಮಾನವು ದೊರೆಯಿತು. ಈ ಬಗೆಯ ಸಂಗತಿಯೊಂದನ್ನು ಮೇಲೆ ತಿಳುಹಿಸಿದೆ. ದೇಶದ ಸಂಪದಭಿವೃದ್ಧಿಗೆ ಸಂಬಂಧಿಸಿದ ವಿಷಯಗಳಲ್ಲಿ ರಂಗಾಚಾರ್ಯರ ಆಸಕ್ತಿಯು ಎಷ್ಟು ಅವಿಚ್ಛಿನ್ನವಾಗಿತ್ತೆಂಬುದು ಇದರಿಂದ ತೋರಿಬರುತ್ತದೆ. ಅವರು ಕಲ್ಲೀಕೋಟೆಯ ಪ್ರಾಂತ ಇದ್ದಾಗ ಅಲ್ಲಿಯ ಕಾಡುಗಳಲ್ಲಿ ಸಿಕ್ಕುವ ಬಗೆ ಬಗೆಯ ಮರಗಳ ಸಣ್ಣಸಣ್ಣ ಹಲಗೆಗಳನ್ನು ಜೋಡಿಸಿ ಮಾಡಿಸಿದ ಒಂದು "ಬೀರೂ" ಪೆಟ್ಟಿಗೆಯು* ಇದಕ್ಕೆ ಮತ್ತೊಂದು ಗುರುತಾಗಿದೆ. ಕಲ್ಲೀಕೋಟೆಯ ಪ್ರಾಂತ ಇದ್ದಾಗ ರಂಗಾಚಾರ್ಯರಿಗೆ ಅವರ ತರುವಾಯ ಮೈಸೂರಿನ ದಿವಾನರಾದ ಕುಮಾರಪುರಂ ಶೇಷಾದ್ರ್ಯಯ್ಯರವರ ಪರಿಚಯವು ಮೊದಲು ಆಯಿತೆಂದು ಹೇಳಿಕೆಯುಂಟು.

---

## ಪರಿಚ್ಛೇದ ೪

## ಮೈಸೂರು ಸೀಮೆಯಲ್ಲಿ ಉದ್ಯೋಗ—"ಬ್ರಿಟಿಷರ ಆಳಿಕೆ"—ದೇಶೀಯರಿಗೆ ಪ್ರೋತ್ಸಾಹ—ರಾಜ್ಯಕೋಶಾಧಿಕಾರ—ಅಪವಾದ ವಿಮೋಚನೆ

"ಸರ್ವಸ್ಯ ಜೀವಲೋಕಸ್ಯ ರಾಜಧರ್ಮಃ ಪರಾಯಣಂ"

(ಸಮಸ್ತ ಜೀವರಾತಿಗಳಿಗೂ ಉತ್ತಮಗತಿ ದೊರೆಯಲು ರಾಜಧರ್ಮವೇ ಪರಮ ಸಾಧಕವು.) —ಶಾಂತಿಪರ್ವ.

೧೮೬೮ನೆಯ ಮಾರ್ಚಿ ೨೭ನೆಯ ತಾರೀಖು ರಾತ್ರಿ ಸುಮಾರು ೧೧ ಘಂಟೆಗೆ ಮೈಸೂರಿನ ಶ್ರೀಮನ್ಮಹಾರಾಜ ಮುಮ್ಮಡಿ ಕೃಷ್ಣರಾಜ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಅವರು ದಿವಂಗತರಾದರು. ಆ ಕಾಲದಲ್ಲಿ ಈ ಸಂಸ್ಥಾನವು ಬ್ರಿಟಿಷ್ ಸರಕಾರದ ವಶದಲ್ಲಿತ್ತು. ಎಲ್. ಬಿ. ಬೌರಿಂಗ್ ಸಾಹೇಬರವರು ಆಗ ಕಮಿಷನರ್ (ಮುಖ್ಯಾಧಿಕಾರಿ) ಆಗಿದ್ದರು. ರಾಜ್ಯವನ್ನು ಸರಿಯಾಗಿ ಆಳಿ, ಕೃಷ್ಣರಾಜ ಒಡೆಯ

---

* ಅದು ಈಗಲೂ ಅವರ ಮನೆಯಲ್ಲಿದೆ.

ರವರ ಪಾಲಕ ಪುತ್ರರಾದ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ, ಅವರು ೧೮ ವರ್ಷ ವಯಸ್ಸಿಗೆ ಬಂದೊಡನೆಯೆ, ಒಪ್ಪಿಸಿಕೊಡು ವುದು ಬ್ರಿಟಿಷರ ಕರ್ತವ್ಯವಾಗಿತ್ತು. ಶ್ರೀ ಕೃಷ್ಣರಾಜ ಒಡೆಯರವರು ಪರಂಧಾಮವನ್ನು ಸೇರಿದ ಬಳಿಕ, ಅವರ ಚರಸ್ಥಿರ ಸ್ವತ್ತುಗಳನ್ನು ಜೋಪಾನಮಾಡಿ, ಅವರ ಸಾಲಗಳನ್ನು ತೀರಿಸಲು ತಕ್ಕ ಏರ್ಪಾಡು ಮಾಡುವುದಕ್ಕಾಗಿ ಮೇಜರ್ ಎಲಿಯಟ್ ಎಂಬವರು ಅಧಿಕಾರಿ ಯಾಗಿ ನಿಯಮಿಸಲ್ಪಟ್ಟಿದ್ದರು. ಇವರಿಗೆ ಸಹಾಯಮಾಡಲು ಒಬ್ಬ ಸಮರ್ಥನೂ ಅನುಭವಸ್ಥನೂ ಆದ ದೇಶೀಯಾಧಿಕಾರಿಯು (ನೇಟೀವ್) ಆವಶ್ಯಕವೆಂದು ಬೌರಿಂಗ್ ಸಾಹೇಬರು ಇಂಡಿಯಾ ಸರಕಾರಕ್ಕೆ ಬರೆದು, ಆ ಸ್ಥಾನಕ್ಕೆ ರಂಗಾಚಾರ್ಯರನ್ನು ನಿಯಮಿಸಬಹುದೆಂದು ಸೂಚಿಸಿ ದರು. ಬೌರಿಂಗರವರಿಗೆ ರಂಗಾಚಾರ್ಯರ ಯೋಗ್ಯತೆಯನ್ನು ತಿಳಿಸಿದ್ದ ವರು ಆಚಾರ್ಯರ ಬಹುಕಾಲದ ಸ್ನೇಹಿತರಾದ ಜಿ. ಎನ್. ಟೇಲರವರು. ಪ್ರಕೃತ ಸಮಯದಲ್ಲಿ ಟೇಲರವರು ಇಂಡಿಯಾ ಸರಕಾರದ ಸಚಿವ ರಲ್ಲೊಬ್ಬರಾಗಿದ್ದರು. ಆದಕಾರಣ ಇಂಡಿಯಾ ಸರಕಾರದವರು ಮೈಸೂರಿನ ಕಮಿಷನರು ಮಾಡಿದ್ದ ಸಲಹೆಯನ್ನು ಸುಲಭವಾಗಿ ಒಪ್ಪು ವಂತಾಯಿತು. ಅದೇ ಪ್ರಕಾರ ಅವರು ರಂಗಾಚಾರ್ಯರಿಗೆ ತಿಂಗ ಳೊಂದಕ್ಕೆ ರೂ. ೮೦೦ರಂತೆ ವೇತನವನ್ನು ಗೊತ್ತುಮಾಡಬಹುದೆಂದು ೧೮೬೮ನೆಯ ಮೇ ೨೯ರಲ್ಲಿ ಬೌರಿಂಗ್ ಸಾಹೇಬರಿಗೆ ತಿಳಿಸಿದರು.

ಈ ಏರ್ಪಾಡಿನಂತೆ ರಂಗಾಚಾರ್ಯರು ೧೮೬೮ನೆಯ ಜೂನ್ ತಿಂಗಳಲ್ಲಿ ಮೈಸೂರಿಗೆ ಬಂದು ತಮ್ಮ ಕೆಲಸದ ಭಾರವನ್ನು ವಹಿಸಿ ಅರಮನೆಯ ಆಡಳಿತದಲ್ಲಿದ್ದ ನ್ಯೂನಾತಿರೇಕಗಳನ್ನು ಬೇಗ ಬೇಗನೆ ತಿದ್ದಲಾರಂಭಿಸಿದರು. ಆ ಕಾಲದಲ್ಲಿ ಅರಮನೆಯಲ್ಲಿದ್ದ ಅವ್ಯವಸ್ಥೆಯು ಈಗಿನ ಕಾಲದವರಿಗೆ ಆಶ್ಚರ್ಯವನ್ನುಂಟುಮಾಡುವಷ್ಟರ ಮಟ್ಟಿನ ದಾಗಿತ್ತು. ಒಂದು ಕಡೆ ಮಾಮೂಲೆಂಬ ನೆವದಿಂದ ಕೈಚಾಚು ತ್ತಿದ್ದ ಬಂಧು ಆಶ್ರಿತ ವರ್ಗಗಳವರು ; ಇನ್ನೊಂದು ಕಡೆ ಜವಾಬ್ದಾರಿ ಯಿಲ್ಲದ ಚಾಕರಿಯ ಹೆಸರಿನಿಂದ ದೋಚುತ್ತಿದ್ದ ಪರಿವಾರದವರು ; ಮತ್ತೊಂದು ಕಡೆ ಲೆಕ್ಕಪತ್ರದ ನಿರ್ಬಂಧವಿಲ್ಲದೆ ಆಡಳಿತ ನಡಿಸುತ್ತಿದ್ದ

ಗುಮಾಸ್ತರು; ಇನ್ನೊಂದು ಕಡೆ ಇದೇ ಸಮಯವೆಂದು ಬಾಯಿಬಿಟ್ಟು ಕೊಂಡಿದ್ದ ಸಾಲಕೊಟ್ಟವರು—ಹೀಗೆ ನಾನಾ ಮುಖವಾಗಿ ಭಂಡಾರವು ಬರಿದಾಗುತ್ತಿತ್ತು. ಈ ದಾಂದಲೆಯಲ್ಲಿ ಮನೆ ತುಂಬಿಸಿಕೊಳ್ಳುತ್ತಿದ್ದ ನೂರಾರು ಜನರು ರಂಗಾಚಾರ್ಯರ ಪ್ರಯತ್ನಗಳಿಗೆ ವಿಘ್ನಕಾರಿಗಳಾದರು. ಸ್ವಕಾರ್ಯಧುರಂಧರರ ದುರಾಗ್ರಹಕ್ಕೆ ಹೆದರುವವರು ನ್ಯಾಯ ಸಮ್ಮತವಾದ ತಿದ್ದುಪಾಟುಗಳಾವುವನ್ನೂ ಎಂದಿಗೂ ಮಾಡಲಾರರು. ಈ ಸೂಕ್ಷ್ಮವನ್ನು ರಂಗಾಚಾರ್ಯರಿಗೆ ಯಾರೂ ಹೇಳಿಕೊಡಬೇಕಾಗಿರಲಿಲ್ಲ. ಧರ್ಮಸಂಕಟದ ಸಂದರ್ಭಗಳಿಂದ ತುಂಬಿದ್ದ ಈ ಕೆಲಸದಲ್ಲಿ ರಂಗಾಚಾರ್ಯರು ಅನನ್ಯವಾದ ಧೈರ್ಯವನ್ನೂ, ತಾಳ್ಮೆಯನ್ನೂ, ನ್ಯಾಯ ಪಕ್ಷಪಾತಿತ್ವವನ್ನೂ, ಸ್ವಾರ್ಥಪರರ ಕ್ರೋಧದ ಕಡೆಗೆ ಔದಾಸೀನ್ಯವನ್ನೂ ತೋರಿಸಬೇಕಾಗಿತ್ತು. ಈ ಗುಣಗಳನ್ನು ಅವರು ಅವಲಂಬಿಸಿ ಅರಮನೆಯ ದುಂದು ವೆಚ್ಚಗಳನ್ನು ಬಹು ವಿಚಕ್ಷಣೆಯಿಂದ ಕಡಿಮೆಮಾಡಿದರು. ಅವರು ಮೈಸೂರಿಗೆ ಬಂದಾಗ ಅರಮನೆಯ ಹಣದಿಂದ ಜೀವಿಸುತ್ತಿದ್ದವರು ೬೧೯ ಮಂದಿ ರಾಜಬಂಧುಗಳಲ್ಲದೆ, ೯,೬೮೭ ಮಂದಿ ಇತರ ಜನರಿದ್ದರು. ಇವರಲ್ಲಿ ಪುರೋಹಿತರು, ಪಂಡಿತರು, ಸಂಗೀತಗಾರರು, ವೈದ್ಯರು, ಓಲೆಕಾರರು, ಒಡೆಯರುಗಳು, ಗೊಲ್ಲರು, ಕಟ್ಟಿಗೆಯವರು, ಭಲ್ಲೆಯವರು, ರಾಚೇವಾರರು, ಕಂದಾಚಾರದವರು, ಶಿಪಾಯಿಗಳು, ಜಟ್ಟಿಗಳು, ಮಾಹುತರು, ಮೇಳಗಾರರು, ಮಷಾಲ್ಜಿಯವರು, ನರ್ತಕರು, ವಿನೋದಗಾರರು—ಇವರೇ ಮೊದಲಾದ ತೆರತೆರದ ಪರಿವಾರದವರು ೨೪ ಇಲಾಖೆಗಳಲ್ಲಿ ಸೇರಿದ್ದರು. ಇವರೆಲ್ಲರ ಒಟ್ಟು ಸಂಬಳವು ತಿಂಗಳೊಂದಕ್ಕೆ ೫೭,೪೫೩ ರೂಪಾಯಿ; ಅಥವಾ ವರ್ಷಕ್ಕೆ ೬,೮೯,೪೨೪ ರೂಪಾಯಿ. ಇದರಲ್ಲಿ ನಿರರ್ಥಕವಾಗಿ ಹೋಗುತ್ತಿದ್ದುದೇ ಬಹು ಭಾಗ. ಹಾಗೆ ದುರ್ವಿನಿಯೋಗಪಡುತ್ತಿದ್ದ ರಾಜ್ಯಾದಾಯವನ್ನು ಮಿತವ್ಯಯದ ಮೂಲಕ ಉಳಿಸಿ, ಪ್ರಜಾಕಾರ್ಯಗಳಿಗೆ ಒದಗಿಸಿಕೊಡುವುದು ಎಲಿಯಟ್‌ರವರ ಮತ್ತು ರಂಗಾಚಾರ್ಯರ ಮುಖ್ಯೋದ್ದೇಶವಾಗಿತ್ತು. ಅವರು ಅರಮನೆಯ ಬೇರೆ ಬೇರೆ ಇಲಾಖೆಗಳಲ್ಲಿಯ ಪ್ರತಿ

ಯೊಬ್ಬನ ಹಕ್ಕು ಬಾಧ್ಯತೆಗಳನ್ನೂ, ಅವನು ಮಾಡುತ್ತಿದ್ದ ಕೆಲಸವನ್ನೂ, ಆ ಕೆಲಸದ ಬೆಲೆಯನ್ನೂ ಚೆನ್ನಾಗಿ ನಿಷ್ಕರ್ಷೆಮಾಡಿ, ಯೋಗ್ಯರಾದ ಜನರನ್ನು ಮಾತ್ರ ಆವಶ್ಯಕ ತೋರಿದಂತೆ ಉದ್ಯೋಗದಲ್ಲಿರಿಸಿಕೊಂಡು, ಉಳಿದವರಿಗೆ ''ಗ್ರ್ಯಾಚುಯಿಟಿ'' (ಪಾರಿತೋಷಿಕ ದ್ರವ್ಯ) ಅಥವಾ ''ಪೆನ್‌ಷನ್'' (ವಿಶ್ರಾಂತಿವೇತನ) ಕೊಟ್ಟು, ಅವರನ್ನು ಮನೆಗೆ ಕಳುಹಿಸಿದರು. ಈ ಏರ್ಪಾಡಿನಿಂದ ಬಹುಮಂದಿಗೆ ಅಸಮಾಧಾನವುಂಟಾದುದು ಆಶ್ಚರ್ಯವೇನೂ ಅಲ್ಲ. ಆದರೆ ರಾಜ್ಯಕ್ಕೆ ಮಾತ್ರ ಹೆಚ್ಚಾದ ಪ್ರಯೋಜನವಾಯಿತು. ಅರಮನೆಯ ಸಂಬಳ ತೆಗೆಯುತ್ತಿದ್ದವರ ಸಂಖ್ಯೆ ೩,೧೯೭ಕ್ಕೂ, ಅವರಿಗಾಗಿ ನಡೆಯುತ್ತಿದ್ದ ವೆಚ್ಚ ೧೯,೨೭೮ ರೂ. ಗೂ ಇಳಿಯಿತು. ಎಂದರೆ ಮೊದಲು ನಡೆಯುತ್ತಿದ್ದ ದುರ್ವ್ಯಯದಲ್ಲಿ ⅔ ಭಾಗವನ್ನು ಮಿಗಿಸಿದಂತಾಯಿತು. ಕಷ್ಟಕರವೂ, ಬೇಸರವನ್ನುಂಟುಮಾಡತಕ್ಕುದೂ ಆದ ಈ ಕೆಲಸವನ್ನು ಎಲಿಯಟ್‌ರವರೂ ರಂಗಾಚಾರ್ಯರೂ ೩—೩॥ ತಿಂಗಳೊಳಗಾಗಿ ಮಾಡಿ ಮುಗಿಸಿದರು. ಬೌರಿಂಗ್ ಸಾಹೇಬರವರು ೧೮೭೮ನೆಯ ಸೆಪ್ಟಂಬರ್ ೫ರಲ್ಲಿ ಇಂಡಿಯಾ ಸರಕಾರದವರಿಗೆ ಬರೆದ ಕಾಗದದಲ್ಲಿ ಈ ಸಂಗತಿಗಳೆಲ್ಲವನ್ನೂ ವಿವರಿಸಿದುದಲ್ಲದೆ, ರಂಗಾಚಾರ್ಯರ ಶ್ರದ್ಧೆ, ಶಕ್ತಿ, ಸಹನೆ, ಜಾಗರೂಕತೆ, ಪ್ರಾಮಾಣಿಕತೆಗಳ ವಿಷಯದಲ್ಲಿ ಎಲಿಯಟ್‌ರವರು ಕೊಟ್ಟಿದ್ದ ಸದಭಿಪ್ರಾಯಗಳನ್ನು ಮತ್ತಷ್ಟು ಪುಷ್ಟೀಕರಿಸಿದರು.

ಏತನ್ಮಧ್ಯೆ, ಇನ್ನೂ ಮಗುವಾಗಿದ್ದ ಶ್ರೀ ಚಾಮರಾಜೇಂದ್ರ ಒಡೆಯರವರಿಗೆ ಪಟ್ಟಾಭಿಷೇಕ ಮಹೋತ್ಸವವು ಆ ಕೂಡಲೆ ನಡೆಯತಕ್ಕುದೆ? ಅಥವಾ ಅವರು ಪ್ರಬುದ್ಧರಾಗಿ ರಾಜ್ಯಾಧಿಕಾರವನ್ನು ಸ್ವತಃ ವಹಿಸುವವರೆಗೂ ಆ ಉತ್ಸವವನ್ನು ನಿಲ್ಲಿಸತಕ್ಕುದೆ?—ಎಂಬ ವಿಷಯದಲ್ಲಿ ಚರ್ಚೆ ನಡೆಯುತ್ತಿತ್ತು. ಪಟ್ಟಾಭಿಷೇಕವು ಕೂಡಿದ ಮಟ್ಟಿಗೆ ಶೀಘ್ರವಾಗಿಯೇ ನಡೆಯುವುದು ಒಳ್ಳೆಯದೆಂದೂ, ಆ ವರ್ಷದ ನವರಾತ್ರಿಯ ಮಹೋತ್ಸವದಲ್ಲಿಯೇ ಅದು ಬೆಳೆಯತಕ್ಕುದೆಂದೂ ರಂಗಾ

ಚಾರ್ಯರು ಅಭಿಪ್ರಾಯಕೊಟ್ಟರು. ಅದರಂತೆ ಸೆಪ್ಟಂಬರ್ ೩ರಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರು ಸಿಂಹಾಸನಾರೂಢರಾದರು.

ತರುವಾಯ (೧೮೬೮ನೆಯ ಡಿಸೆಂಬರು ಸುಮಾರಿನಲ್ಲಿ), ಅರಮನೆಯ ಕಾರ್ಯದರ್ಶಿ (ಕಂಟ್ರೋಲರ್) ಆಗಿದ್ದುಕೊಂಡು, ಬಾಲಕರಾದ ಶ್ರೀ ಚಾಮರಾಜೇಂದ್ರ ಒಡೆಯರವರ (ಗಾರ್ಡಿಯನ್) ಪೋಷಕರಿಗೆ ಸಹಾಯವಾಗಿರತಕ್ಕ ಭಾರವು ರಂಗಾಚಾರ್ಯರಿಗೇ ವಹಿಸಲ್ಪಟ್ಟಿತು. ಪೋಷಕ ಪದವಿಗೆ ಮೊದಲು ಲೆಫ್ಟಿನೆಂಟ್ ಕರ್ನಲ್ ಹೇನಸ್ ಸಾಹೇಬರೂ, ಅನಂತರ ಮ್ಯಾಲೆಸನ್‌ರವರೂ, ಆಮೇಲೆ ಜೇಮ್ಸ್ ಗಾರ್ಡನ್‌ರವರೂ ಬಂದರು. ಇವರೆಲ್ಲರೂ ರಂಗಾಚಾರ್ಯರಲ್ಲಿ ಗಾಢವಾದ ಮೈತ್ರಿಯನ್ನು ಬೆಳೆಯಿಸಿದರಲ್ಲದೆ, ಆಚಾರ್ಯರು ಈ ಸಂಸ್ಥಾನದ ಮತ್ತು ಅದರ ರಾಜರ ಪುರೋವೃದ್ಧಿಗಾಗಿ ಮಾಡುತ್ತಿದ್ದ ಪ್ರಯತ್ನ ಸಂಕಲ್ಪಗಳಿಗೆ ಒತ್ತಾಸೆಕೊಡುತ್ತಿದ್ದರು.

ಈ ಸಮಯದಲ್ಲಿ ರಂಗಾಚಾರ್ಯರಿಗೆ ಸಹಾಯಕರಾಗಿದ್ದ ದೇಶೀಯ ಜನರಲ್ಲಿ ಜಯರಾಮರಾಯರೆಂಬವರು ಅತಿ ಮುಖ್ಯರು. ಇವರು ಇಂಗ್ಲೆಂಡು ಮುಂತಾದ ಪಾಶ್ಚಾತ್ಯ ದೇಶಗಳಲ್ಲಿ ಸಂಚಾರ ಮಾಡಿ ವಿದ್ಯಾವೈದುಷ್ಯಗಳನ್ನು ಪಡೆದಿದ್ದರು. ಅವರ ದೇಶಾಟನೆಗೆ ರಂಗಾಚಾರ್ಯರು ಸಹಾಯ ಕೊಟ್ಟಿದ್ದರಲ್ಲದೆ, ಇತರ ವಿಧಗಳಲ್ಲಿಯೂ ಅವರನ್ನು ಪ್ರೋತ್ಸಾಹಿಸಿದ್ದರು. ಜಯರಾಮರಾಯರು ಬಹು ಭಾಷಾ ವಿಶಾರದರು. ಅವರು ೧೮೭೧ರಲ್ಲಿ ಲಂಡನ್ ಪಟ್ಟಣದಲ್ಲಿ ಒಂದು ಉಪನ್ಯಾಸಮಾಡಿ, ಅದರಲ್ಲಿ ಕ್ರೈಸ್ತ ಪಾದರಿಗಳು ಇಂಡಿಯಾದೇಶದಲ್ಲಿ ಕ್ರಿಸ್ತ ಮತ ಪ್ರಚಾರಕ್ಕಾಗಿ ತೆಗೆದುಕೊಳ್ಳುವ ಶ್ರಮವು ಸಾರ್ಥಕವಾಗದೆಂದೂ, ದೇಶೀಯರನ್ನು ಉತ್ತಮ ಸ್ಥಿತಿಗೆ ತರಲು ದೇಶೀಯರೇ ಶಕ್ತರೆಂದೂ, ಹಿಂದೂಗಳಿಗೆ ಸರಕಾರವು ಕೊಡಿಸುವ ವಿದ್ಯಾಭ್ಯಾಸದಲ್ಲಿ "ಸೈನ್ಸ್" ಅಥವಾ ವಿಜ್ಞಾನಶಾಸ್ತ್ರ ಭಾಗವು ಹೆಚ್ಚಾಗಿರಬೇಕೆಂದೂ ವಾದಿಸಿದ್ದರು.

ಶ್ರೀ ಚಾಮರಾಜೇಂದ್ರ ಒಡೆಯರವರನ್ನು ಅವರ ಮಹತ್ಪದವಿಗೆ ಅರ್ಹರನ್ನಾಗಿ ಮಾಡುವ ಕಾರ್ಯದಲ್ಲಿ ರಂಗಾಚಾರ್ಯರು ತ್ರಿಕರಣ

ಪೂರ್ವಕವಾಗಿ ಶ್ರದ್ಧೆ ವಹಿಸಿ, ಕರ್ತವ್ಯಶೀಲನಾದ ತಂದೆಯು ತನ್ನ ಮಗನ ವಿದ್ಯಾಭ್ಯಾಸಕ್ಕಾಗಿ ಹೇಗೆ ಶ್ರಮತೆಗೆದುಕೊಳ್ಳುವನೋ ಹಾಗೆ, ಹಗಲೂ ಇರುಳೂ ಶ್ರಮಿಸುತ್ತಿದ್ದರು. ರಾಜರ ಪಾಠ ಪ್ರವಚನಗಳಿಗೆ ಮಾತ್ರವೇ ಅಲ್ಲದೆ, ಅವರ ಮಿತ್ರಗೋಷ್ಠಿ, ಅವರ ಆಟಪಾಟಗಳು, ಅವರ ಅಂಗಸಾಧನೆ, ಆರೋಗ್ಯ, ಉಡುಪು ತೊಡಪುಗಳು, ನಡೆನುಡಿಗಳು, ವಿಶ್ವಾಸ ದ್ವೇಷಗಳು—ಇವುಗಳಿಗೆಲ್ಲ ರಂಗಾಚಾರ್ಯರು ಕ್ಷಣೇಕ್ಷಣೇ ಗಮನಕೊಟ್ಟು ಮಹಾರಾಜರ ಮನೋವೃತ್ತಿಯನ್ನು ತಿದ್ದುತ್ತಿದ್ದರು. ಮಹಾರಾಜರವರು ಇದನ್ನು ಜ್ಞಾಪಕದಲ್ಲಿರಿಸಿ, ರಂಗಾಚಾರ್ಯರಲ್ಲಿ ಗುರುಭಕ್ತಿಯನ್ನೂ ಪಿತೃಭಕ್ತಿಯನ್ನೂ ಇಟ್ಟಿದ್ದರೆಂಬುದು ಅವರ ನಡತೆಯಿಂದಲೂ, ಅವರ ಕಾಗದಗಳಿಂದಲೂ ತಿಳಿದು ಬರುತ್ತದೆ. ಯಾರು ರಾಜರ ಬುದ್ಧಿಯನ್ನು ರಾಜಧರ್ಮಗಳಲ್ಲಿ ಪ್ರವೇಶಗೊಳಿಸಿ, ಅವರು ಧರ್ಮಿಷ್ಠರಾಗುವಂತೆ ಮಾಡುತ್ತಾನೆಯೋ ಆತನು ದೇಶಕ್ಕೆಲ್ಲ ಉಪಕಾರಮಾಡಿದವನಾಗುತ್ತಾನೆ.

೧೮೭೪ರಲ್ಲಿ ರಂಗಾಚಾರ್ಯರು ''ಮೈಸೂರಿನಲ್ಲಿ ಬ್ರಿಟಿಷರ ಆಳಿಕೆ''—ಎಂಬ ವಿಚಾರವನ್ನು ಕುರಿತ ಒಂದು ಪ್ರಬಂಧವನ್ನು ಸಂಕಲ್ಪಿಸಿ, ಅದರ ಪ್ರಥಮ ಭಾಗವನ್ನು ಬರೆದು, ಲಂಡನ್ ನಗರದಲ್ಲಿ ಪ್ರಕಟಗೊಳಿಸಿದರು. ಇದರಿಂದ ಆಗಿನ ಆಂಗ್ಲೇಯಾಧಿಕಾರಿಗಳ ಆಡಳಿತದ ಕೊರತೆ ಕುಂದುಗಳು ಬಯಲಾದವು. ಹಿಂದೆ ರಂಗಾಚಾರ್ಯರು ಸ್ವದೇಶೀಯರ ತಪ್ಪುಗಳನ್ನು ದುರಭಿಮಾನವಿಲ್ಲದೆ ಬಯಲುಮಾಡಿದ್ದಂತೆಯೇ, ಈಗ ಪ್ರಭುಜಾತಿಯವರಾದ ವಿದೇಶೀಯರ ತಪ್ಪುಗಳನ್ನೂ ಅವರು ನಿರ್ಭಯವಾಗಿ ಎತ್ತಿ ತೋರಿಸಿದರು. ರಂಗಾಚಾರ್ಯರ ಧರ್ಮಪರತೆಯೂ, ಪ್ರಜಾಪಕ್ಷಾವಲಂಬನೆಯೂ, ಸೂಕ್ಷ್ಮದರ್ಶಿತ್ವವೂ ಇದರಿಂದ ಪ್ರಪಂಚಕ್ಕೆ ಗೊತ್ತಾದುವು.

ಮೈಸೂರು ದೇಶದಲ್ಲಿಯ ಐವತ್ತು ವರ್ಷದ ಬ್ರಿಟಿಷರ ಆಳಿಕೆಯನ್ನು ಕುರಿತು ರಂಗಾಚಾರ್ಯರು ಬರೆದ ಪ್ರಕರಣದ ಮುಖ್ಯಾಂಶಗಳನ್ನೀರೀತಿ ಸಂಗ್ರಹಿಸಿ ಬರೆಯಬಹುದು :—

"ದೇಶೀಯ ಸಂಸ್ಥಾನಗಳನ್ನು ಬ್ರಿಟಿಷ್ ರಾಜ್ಯಕ್ಕೆ ಸೇರಿಸಿಕೊಳ್ಳುವ ಪದ್ಧತಿಯು ಪ್ರಾರಂಭವಾದಾಗ, ದೇಶೀಯ (ನೇಟಿವ್) ಪ್ರಭುತ್ವದ ಅವಿಚಕ್ಷಣೆಯೇ ಅದಕ್ಕೆ ಕಾರಣ ವೆಂದೂ, ಪ್ರಜೆಗಳ ಕ್ಷೇಮಾಭ್ಯುದಯಗಳಿಗೆ ಬ್ರಿಟಿಷ್ ಆಧಿಪತ್ಯವು ಖಂಡಿತವಾಗಿ ಆವಶ್ಯಕ ವೆಂದೂ ಬಹು ಮಂದಿ ಸತ್ಯವಾಗಿ ತಿಳಿದುಕೊಂಡಿದ್ದರು. ಪ್ರತಿಯೊಂದು ವಿಷಯದಲ್ಲಿಯೂ ಪ್ರಯೋಜನವನ್ನೇ ಮುಖ್ಯವಾಗಿ ಪರಿಗಣಿಸುವ ಈ ಕಾಲದಲ್ಲಿ, ಯಾವ ಸಂಸ್ಥೆಯೇ ಆಗಲಿ, ಯಾವ ಏರ್ಪಾಡೇ ಆಗಲಿ ಪ್ರಜಾನುಕೂಲವಾಗದಿದ್ದರೆ ಬಹುಕಾಲ ನಿಲ್ಲಲಾರದು. ಈ ಕಾರಣದಿಂದ ಹಿಂದಿನ ದೇಶೀಯ ದೌಲತ್ತುಗಳು ಲುಪ್ತವಾಗಬೇಕಾಗಿ ಬಂದರೂ, ಈಗ ಅವುಗಳ ಸ್ಥಾನವನ್ನಾಕ್ರಮಿಸಿರುವ ಬ್ರಿಟಿಷ್ ಪ್ರಭುತ್ವವೂ ಸಹ ಮೊದಲು ತೋರಿದಷ್ಟು ಪ್ರಜಾನುಕೂಲವಾಗಿ ಕೆಲವು ಕಾಲದಮೇಲೆ ತೋರುತ್ತಿಲ್ಲ. ಬ್ರಿಟಿಷ್ ಆಡಳಿತದಲ್ಲಿ, ರಾಜ್ಯ ವ್ಯವಸ್ಥೆಯು ಕ್ರಮಪಟ್ಟು, ರಾಜ್ಯಾದಾಯವು ತೃಪ್ತಿಕರವಾದೊಡನೆಯೇ ಅದರ ಉತ್ತಮತೆಯೆಲ್ಲವೂ ಮುಗಿಯುವುದು. ಪ್ರಜೆಗಳನ್ನು ಸಾಮಾಜಿಕಾಭಿವೃದ್ಧಿಯ ನಾನಾ ಮಾರ್ಗಗಳಲ್ಲಿ ಮುಂದೆ ನಡೆಯಿಸುವುದಕ್ಕೆ ಬ್ರಿಟಿಷರ ಪ್ರಯತ್ನವು ಅಷ್ಟು ವಿಶೇಷವಾಗಿರು ವುದಿಲ್ಲ. ಈ ಬಗೆಯ ಪ್ರಯತ್ನಗಳು ದೇಶೀಯ ಪ್ರಭುತ್ವದಲ್ಲಿ ಬೇಕಾದಷ್ಟು ಮಟ್ಟಿಗೆ ನಡೆದಾವೆಂಬ ಭರವಸೆಯು ಎದುವರೆಗೂ ತೋರಿಬರುವುದಿಲ್ಲವೋ ಅದುವರೆಗೂ ದೇಶೀಯ ಸಂಸ್ಥಾನಗಳ ಪುನರುಜ್ಜೀವನಕ್ಕೂ ತಕ್ಕಷ್ಟು ಕಾರಣವಿರುವುದಿಲ್ಲ. ಹೀಗಿರುವಲ್ಲಿ, ಬ್ರಿಟಿಷರ ರಾಜ್ಯವಿಚಕ್ಷಣೆಯೂ ದೇಶೀಯರ ಸ್ವಜನಾಭಿಮಾನವೂ ಕಲೆಯುವಂತೆ ಮಾಡಿದರೆ ಉತ್ತಮ ಫಲಗಳನ್ನು ನಿರೀಕ್ಷಿಸಬಹುದು. ಹಾಗೆ ಮಾಡಲು ಈಗ ಅನೇಕ ಸಂಸ್ಥಾನ ಗಳಲ್ಲಿ ಅವಕಾಶವಿದೆ. ಎಲ್ಲೆಲ್ಲಿ ರಾಜರ ಬಾಲ್ಯದ (ಮೈನಾರಿಟಿ) ದೆಸೆಯಿಂದಲೋ, ಇತರ ಕಾರಣಗಳಿಂದಲೋ ಬ್ರಿಟಿಷರು ಆಳಿಕೆಯನ್ನು ಕೈಗೊಂಡಿರುವರೋ, ಅಲ್ಲೆಲ್ಲಾ ಅವರು ದೇಶೀಯರನ್ನೇ ದೊಡ್ಡ ಅಧಿಕಾರಗಳಿಗೆ ನಿಯಮಿಸಿ, ಅವರನ್ನು ತಮ್ಮ (ಬ್ರಿಟಿಷ್) ಕ್ರಮ ಗಳಲ್ಲಿ ತಯಾರುಮಾಡಲು ಅನುಕೂಲವಿದೆ. ಇಂತಹ ಸಂಸ್ಥಾನಗಳಲ್ಲಿ ಮೈಸೂರು ರಾಜ್ಯವು ಒಂದಾಗಿದೆ.

"ಇಂಡಿಯಾದೇಶದಲ್ಲಿ ಸರಕಾರಗಳಿಗೆ ಸಂಬಂಧಪಟ್ಟ ಒಂದು ವಿಶೇಷ ವಿಷಯ ವೇನಂದರೆ—ಅಧಿಕಾರಿಗಳು ಹೇರಳವಾಗಿ "ರಿಪೋರ್ಟು"(ವಿವರಣೆ)ಗಳನ್ನೂ ಇಸ್ತಿ ಹಾರುಗಳನ್ನೂ ಬರೆದು ಮುದ್ರಿಸುತ್ತಿದ್ದರೂ, ಅವು ಜನಸಾಮಾನ್ಯದ ಗಮನಕ್ಕೂ ಚರ್ಚೆಗೂ ಬರುವುದಿಲ್ಲ. ಇದಕ್ಕೆ ಒಂದು ಕಾರಣವುಂಟು:—ಸರಕಾರವು ಗೊತ್ತಾದ ಉದ್ದೇಶಗಳನ್ನಿಟ್ಟು ಕೊಂಡು, ಪ್ರಜೆಗಳ ಯೋಗಕ್ಷೇಮಗಳ ಮರ್ಮಗಳನ್ನರಿತು, ಅದಕ್ಕನುಸಾರವಾಗಿ ನಡೆಯುತ್ತಿದ್ದರೆ, ಅದರ ರಿಪೋರ್ಟುಗಳು ಮನೋರಂಜಕವಾಗಿರುತ್ತವೆ. ಹಾಗಿಲ್ಲದೆ ಸರಕಾರೀ ಇಲಾಖೆಗಳವರು ತಮ್ಮ ತಮ್ಮ ಕಛೇರೀ ವರ್ತಮಾನಗಳನ್ನೇ ದೊಡ್ಡದಾಗಿ

ಎಣಿಸಿ, ಬದುಕಿರುವ ಮನುಷ್ಯರನ್ನು ಬಿಟ್ಟು ನಿರ್ಜೀವವಾದ ಕಾಗದಗಳ ಮುಖೇನ ಕಾರುಬಾರು ನಡೆಸುತ್ತಿದ್ದರೆ, ಅವರ ರಿಪೋರ್ಟುಗಳು ವಿಧ ವಿಧವಾದ ತಖ್ತೆಗಳಿಂದಲೂ ಪಟ್ಟಿಗಳಿಂದಲೂ ಕೂಡಿದ್ದರೂ ಒಣ ಹರಟೆಯಾಗಿಯೇ ಇರುತ್ತವೆ.

"ಮೈಸೂರು ರಾಜ್ಯವನ್ನು (೧೮೩೧ರಲ್ಲಿ) ಬ್ರಿಟಿಷ್ ಸರಕಾರವು ಸ್ವಾಧೀನಕ್ಕೆ ತೆಗೆದುಕೊಂಡಾಗ,—ಅದು ಸ್ವಲ್ಪ ಕಾಲದ ಏರ್ಪಾಡಾದಕಾರಣ—ರಾಜ್ಯೋದ್ಯೋಗಗಳಿಗೆ ಸಾಧ್ಯವಾದಮಟ್ಟಿಗೂ ದೇಶೀಯರನ್ನೇ ನಿಯಮಿಸಬೇಕೆಂದೂ, ದೇಶೀಯ ಸಂಸ್ಥೆಗಳನ್ನು ಕೂಡಿದ ಮಟ್ಟಿಗೂ ಕಾಪಾಡಬೇಕೆಂದೂ ನಿಷ್ಕರ್ಷೆಯಾಗಿತ್ತು. ಈ ನಿಬಂಧನೆಗಳನ್ನು ಮೊದಲನೆಯ ಕಮಿಷನರಾದ ಸರ್ ಮಾರ್ಕ್ ಕಬ್ಬನ್ ದೊರೆಗಳು ಬಹುಮಟ್ಟಿಗೆ ನಡೆಯಿಸಿದರು. ಅವರು ಮಾಡಿದ ಏರ್ಪಾಡುಗಳಿಂದ ರಾಜ್ಯಕಾರ್ಯಗಳು ಕ್ರಮಕ್ಕೆ ಬಂದು, ಎಲ್ಲಾ ಕಡೆಯೂ ಶಾಂತಿ ಸಮಾಧಾನಗಳುಂಟಾದವು. ಆದರೆ ಒಂದು ಕೊರತೆ ಯಿತ್ತು. ಅದೇನೆಂದರೆ, ಅಧಿಕಾರಸ್ಥರ ಮಿತಿಮೀರಿದ ಪ್ರಾಬಲ್ಯ. ಎಲ್ಲಾ ಕಾರ್ಯ ಗಳಿಗೂ ರೈತಾಪೀ ಜನರು ಸರಕಾರೀ ನೌಕರರನ್ನೇ ಅನುಸರಿಸಬೇಕಾಗಿತ್ತು. ಆದರೆ ಆಗ ರೈತರು ಈ ಕೊರತೆಯನ್ನು ತಿಳಿದುಕೊಳ್ಳುವಷ್ಟು ಜಾಗರೂಕರಾಗಿರಲಿಲ್ಲ. ಆಗಿನ ಅಧಿಕಾರಿ ಗಳಾದರೋ,—ಕಮಿಷನರವರು (ಕಬ್ಬನ್‌ರವರು) ದಯಾಳುಗಳೂ, ಕ್ಷಮಾಶೀಲರೂ ಆಗಿದ್ದ ಕಾರಣ,—ತಮ್ಮ ಆಡಳಿತಗಳಲ್ಲಿ ನಿಃಸ್ಪೃಹರಾಗಿರಲಿಲ್ಲ. ಈ ರೀತಿ ರಾಜ್ಯಕ್ರಮದಲ್ಲಿ ಬಿಗಿಯೂ, ಸುಶಿಕ್ಷಿತತೆಯೂ ಇಲ್ಲದೆ ಹೋಗಿತ್ತು.

"ಕಬ್ಬನ್‌ರ ತರುವಾಯ ಬಂದವರಾದರೋ (ಸಾಂಡರ್ಸ್, ಬೌರಿಂಗ್ ಮುಂತಾ ದವರು) ದರ್ಪಶಾಲಿಗಳಾದಕಾರಣ, ಆಡಳಿತದಲ್ಲಿನ ಹೆಚ್ಚುಕಡಿಮೆಗಳನ್ನು ಸರಿಪಡಿಸುವ ಉದ್ದೇಶ್ಯದಿಂದ ದೊಡ್ಡ ದೊಡ್ಡ ಮಾರ್ಪಾಡುಗಳನ್ನು ಮೊದಲುಮಾಡಿದರು. ರಾಜ್ಯದ ನಾಲ್ಕು ಭಾಗಗಳನ್ನು ಎಂಟಾಗಿ ಮಾಡಿದರು. ಇಲಾಖೆಗಳನ್ನೂ ಹೆಚ್ಚಿಸಿದರು. ಈ ರೀತಿ ಉಂಟಾದ ಹೊಸ ಅಧಿಕಾರಗಳಿಗೆ ಹೆಚ್ಚು ಮಂದಿ ಐರೋಪ್ಯರನ್ನು ತರಬೇಕಾಯಿತು. ಹಾಗೆಯೇ ಅವರ ಸಿಬ್ಬಂದಿಯೂ ಹೆಚ್ಚಬೇಕಾಯಿತು. ಬ್ರಿಟಿಷ್ ಪ್ರಾಂತಗಳಲ್ಲಿರು ವುದಕ್ಕಿಂತ ಮೈಸೂರು ಸಂಸ್ಥಾನದಲ್ಲಿ ಕಛೇರಿಗಳ ಸಂಖ್ಯೆಯೂ ಯೂರೋಪಿಯನ್ ಹುದ್ದೇದಾರರ ಸಂಖ್ಯೆಯೂ ಹೆಚ್ಚಾದುವು. ಈ ಮಹಾಸಮಾರಾಧನೆಯಲ್ಲಿ ಯೋಗ್ಯತಾ ಪರೀಕ್ಷೆಗೆ ಸಾವಧಾನವಿಲ್ಲದೆ ಹೋಗಿ, ದೇಶೀಯರ ಹಕ್ಕುಗಳನ್ನು ವಿಚಾರಿಸುವವರಿಲ್ಲ ದಂತಾಗಿ, ಅಸಮರ್ಥರೂ ಅಯೋಗ್ಯರೂ ಆದವರಿಗೆ ಅಧಿಕಾರ ದೊರೆಯಲು ಅನುಕೂಲ ವಾಯಿತು."

ಈ ರೀತಿ ಪೀಠಿಕೆಯಾಗಿ ಹೇಳಿರುವ ಅಭಿಪ್ರಾಯಗಳನ್ನು ರಂಗಾಚಾರ್ಯರು ೧೮೭೧-೭೨ನೆಯ ವರ್ಷದ ರಿಪೋರ್ಟಿನ ಅಂಶಗಳಿಂದ ಬಾಬುವಾರಾಗಿ ದೃಢಪಡಿಸಿರುವರು.

ಆ ಪರೀಕ್ಷೆಯಲ್ಲಿನ ವಿಷಯಗಳಾವುವೆಂದರೆ:—"ಜ್ಯುಡಿಷಿಯಲ್" ಅಥವಾ ನ್ಯಾಯ ವಿಚಾರಣೆಯ ಇಲಾಖೆಯಲ್ಲಿ, ನ್ಯಾಯತೀರ್ಮಾನದ ಅಧಿಕಾರವನ್ನು ರೆವೆನ್ಯೂ ಮೊದಲಾದ "ಎಕ್ಸಿಕ್ಯೂಟಿವ್" (ಸರಕಾರೀ ಹುಕುಂ ಚಲಾಯಿಸುವ) ಅಧಿಕಾರಗಳಿಂದ ಬೇರೆ ಮಾಡಬೇಕು. ನ್ಯಾಯವಿಮರ್ಶೆಯ ಕ್ರಮವು ಇಂಗ್ಲಿಷ್ ಸಂಪ್ರದಾಯಗಳನ್ನೇ ಸಂಪೂರ್ಣ ವಾಗಿ ಅನುಸರಿಸದೆ, ದೇಶೀಯ ಸಂಪ್ರದಾಯವನ್ನೂ ಅನುಸರಿಸಿರಬೇಕು.

ಕಾನೂನು ಕಾಯಿದೆಗಳನ್ನು ಅವಸರಪಟ್ಟು, ಜನರ ತಿಳಿವಳಿಕೆಗೆ ಮೀರಿರುವ ರೀತಿ ಯಲ್ಲಿ, ಅವರ ಅನುಕೂಲ ಪ್ರತಿಕೂಲಗಳನ್ನು ವಿಚಾರಿಸದೆ, ರಚಿಸಬಾರದು.

ಪೊಲೀಸ್ ಇಲಾಖೆಯಲ್ಲಿ, ಬಹುಮಂದಿ ಜವಾನರುಗಳ ಮತ್ತು ಅಧಿಕಾರಸ್ಥರ ನಡೆವಳಿಕೆಯು ಅನುಮಾನಕ್ಕೆ ಗುರಿಯಾಗಿದೆ; ಯುರೋಪಿಯನ್ ಹುದ್ದೇದಾರರಿದ್ದ ಮಾತ್ರದಿಂದಲೇ ಎಲ್ಲವೂ ಸರಿಹೋಗದು.

ರೆವೆನ್ಯೂ ಇಲಾಖೆಯಲ್ಲಿ, ಸರ್ವೇ ಕೆಲಸವನ್ನು ನಡೆಯಿಸುವುದಕ್ಕೆ ದೇಶೀಯ ಜನರನ್ನು ಇನ್ನೂ ತಯಾರು ಮಾಡಿಲ್ಲ. ಹಾಗೆ ಮಾಡುವುದು ಅತ್ಯಾವಶ್ಯಕ.

ಅಡಕೆ, ತೆಂಗು, ಹೊಗೆಯಸೊಪ್ಪು ಮುಂತಾದ ಫಲವೃಕ್ಷಗಳ ಮೇಲಣ ತೆರಿಗೆಯನ್ನು ತೆಗೆದುಹಾಕಬೇಕು; ಬೇಕಾದರೆ ಅವು ಹೆಚ್ಚಾಗಿ ಬೆಳೆಯುವ ಪ್ರದೇಶಗಳಲ್ಲಿ ನೆಲಗಂದಾ ಯದ ದರಗಳನ್ನು ಹೆಚ್ಚಿಸಬಹುದು.

ಅಂಗಡಿ ಸುಂಕ, ಭಂಡಿ ಸುಂಕ, ಮಗ್ಗದ ಸುಂಕ, ಗಾಣದ ಸುಂಕ ಮುಂತಾದ ಚಿಲ್ಲರೆ ಬಾಬುಗಳನ್ನು ವಜಾಮಾಡಿ, ಅವುಗಳ ಮೇಲಣ ಅಧಿಕಾರವನ್ನು ಗ್ರಾಮಸಭೆ (ಮ್ಯುನಿಸಿಪಾಲಿಟಿ)ಗಳಿಗೆ ಕೊಡಬೇಕು.

ಆಬ್ಕಾರೀ ಇಲಾಖೆಯಲ್ಲಿ ಮದ್ಯಪಾನವನ್ನು ಕಡಿಮೆಮಾಡುವುದಕ್ಕೆ ತಕ್ಕಷ್ಟು ಗಮನವನ್ನು ಕೊಡುತ್ತಿಲ್ಲ. ಪೂರ್ವದಲ್ಲಿ ಈ ದುರಭ್ಯಾಸವು ಈ ದೇಶದ ಜನರಲ್ಲಿ ವ್ಯಾಪಿ ಸಿರಲಿಲ್ಲ. ಹೆಂಡದ ಅಂಗಡಿಗಳ ಸಂಖ್ಯೆಯನ್ನೂ, ಅವು ತೆರೆದಿರುವ ಕಾಲವನ್ನೂ, ಮಾದಕ ದ್ರವ್ಯಗಳ ಬಲ ಅಳತೆಗಳನ್ನೂ ಸರಕಾರದವರೇ ಮಿತಿಮಾಡಿಟ್ಟರೆ ಕುಡುಕತನವು ಹರಡಲು ಕೊಂಚಮಟ್ಟಿಗೆ ತಡೆಯಾದೀತು.

ಫಾರೆಸ್ಟ್ (ಜಂಗ್ಲಿ) ಇಲಾಖೆಯಲ್ಲಿ ಗಲಾಟೆ ಹೆಚ್ಚು, ಕಾರ್ಯ ಕಡಿಮೆ. ಹಳ್ಳಿಗಳ ಸುತ್ತುಮುತ್ತಲಿರುವ ಕಾಡುಗಳನ್ನು ಹಳ್ಳಿಗಳವರ ಆಡಳಿತಕ್ಕೇ ಬಿಡಬೇಕು; ಇಲ್ಲದಿದ್ದರೆ ಅವರಿಗೆ ತೊಂದರೆ.

ಮರಾಮತ್ ಇಲಾಖೆಯು ವಿಪರೀತವಾಗಿ ಬೆಳೆದಿದೆ. ದುಂದು ವೆಚ್ಚವು ಮಿತಿ ಮೀರಿರುವುದಲ್ಲದೆ, ರೈತಾಪಿ ಜನರಿಗೆ ಬಿಟ್ಟಿ ಚಾಕರಿಯ ಕಿರುಕುಳವೂ ಹೆಚ್ಚಾಗಿದೆ. ಈ ವ್ಯರ್ಥ ವ್ಯಯದ ದೆಸೆಯಿಂದ ರೆಯಿಲು ಹಾಕುವ ಕೆಲಸಕ್ಕೆ ಅನುಕೂಲ ತಪ್ಪಿದೆ.

ವಿದ್ಯಾ ಪ್ರಚಾರದ ಇಲಾಖೆಯಲ್ಲಿ ಸರಕಾರದ ಆಸಕ್ತಿಯು ವಿಶೇಷವಾಗಿಲ್ಲ. ವಿದ್ಯಾಭ್ಯಾಸ ಕ್ರಮವು ಎಲ್ಲಾ ಭಾಗಗಳಲ್ಲಿಯೂ ತೃಪ್ತಿಕರವಾಗಿಲ್ಲ.

ವೈದ್ಯ ವಿದ್ಯೆಯನ್ನು ಹರಡಲು ತಕ್ಕಷ್ಟು ಪ್ರಯತ್ನ ನಡೆದಿಲ್ಲ.

ವ್ಯವಸಾಯ ಕ್ರಮವನ್ನುತ್ತಮಗೊಳಿಸುವ ಪ್ರಯತ್ನಗಳು ಈ ದೇಶದಲ್ಲಿ ಸಫಲವಾಗಲಾರವೆಂದು ಆ ಇಲಾಖೆಯ ಅಧಿಕಾರಿಯೇ ಸಿದ್ಧಾಂತಮಾಡಿರುವನು.

ಈ ಮೇಲೆ ಹೇಳಿದ ಅತೃಪ್ತಿಗೆಲ್ಲಾ ಕಾರಣವೇನೆಂದರೆ,—ರಾಜ್ಯಭಾರವನ್ನು ವಹಿಸಿರುವವರು ಪ್ರಜೆಗಳ ಸ್ವಭಾವವನ್ನೂ ಅಭಿಪ್ರಾಯಗಳನ್ನೂ ತಿಳಿದುಕೊಳ್ಳದೆ ಕೆಲಸಮಾಡುತ್ತಿರುವುದು. ಅಧಿಕಾರಸ್ಥರು ತಮ್ಮಿಷ್ಟಕ್ಕೆ ತಾವು ಇದ್ದುಕೊಂಡು, ಬಾಹ್ಯ ಪ್ರಪಂಚದ ಅನುಭವವಿಲ್ಲದೆ, ತಮ್ಮ ಸ್ವಂತ ಸಮಾಧಾನಕ್ಕಾಗಿ ಕಾರ್ಯಗಳನ್ನು ಯತ್ನಿಸುತ್ತಿರುವರು. ಅದು ಪ್ರಜೆಗಳಿಗೆ ಉಪಯುಕ್ತವಾಗದಿರುವುದು ಸ್ವಾಭಾವಿಕವಾಗಿಯೇ ಇದೆ.

ಮುಖ್ಯ ಸಿದ್ಧಾಂತವೇನೆಂದರೆ:—"ಬ್ರಿಟಿಷ್ ಕಮಿಷನರುಗಳ ಕಾಲದ ರಾಜ್ಯಾಭಿವೃದ್ಧಿಯೆಲ್ಲವೂ ಸಂಸ್ಥಾನದಲ್ಲಿ ಸಮಾಧಾನ ಸ್ಥಿತಿಯೂ ಸರಕಾರದ ವ್ಯವಸ್ಥೆಯೂ ನೆಲೆಗೊಂಡೊಡನೆಯೇ ಕೊನೆಗಂಡಿತು. ಅಲ್ಲಿಂದ ಮುಂದೆ, ನಡೆಯಬೇಕಾಗಿದ್ದ ಅಭಿವೃದ್ಧಿ ಕಾರ್ಯಗಳಿಗೆಲ್ಲಾ ಪ್ರತಿಯಾಗಿ, ಇಲಾಖೆಗಳೂ ಅಧಿಕಾರಸ್ಥರೂ ಹೆಚ್ಚಿರುವರು. ರಾಜ್ಯಾದಾಯವು ಮೊದಲಿನದರ ದ್ವಿಗುಣವಾಗಿದ್ದರೂ, ಅದೆಲ್ಲವೂ ಸರಕಾರೀ ಚಾಕರರ ಸಂಬಳಕ್ಕೇ ಸರಿಹೋಗುತ್ತಿದೆ. ದೇಶೀಯ ಪ್ರಭುತ್ವಕ್ಕೆ ಭದ್ರವಾದ ತಳಹದಿ ಎಲ್ಲಿರುವುದೆಂದರೆ—ಬಾಹ್ಯ ದೃಷ್ಟಿಗೆ ಗೋಚರವಾಗುವ ಏರ್ಪಾಟುಗಳಲ್ಲಿ ಅಥವಾ ಉಪಕರಣಗಳಲ್ಲಿ ಅಲ್ಲ; ಅಧಿಕ ವ್ಯಯಸಾಧ್ಯವಾದ ಪರಿವಾರ ಸಿಬ್ಬಂದಿಗಳಲ್ಲಿ ಅಲ್ಲ; ಅವರು ಮಾಡಬಹುದಾದ ಕಾರ್ಯಕಲಾಪಗಳಲ್ಲಿಯೂ ಇಲ್ಲ. ದೇಶೀಯರನ್ನು ವಿದ್ಯಾವಂತರನ್ನಾಗಿಮಾಡಿ, ತಿದ್ದಿ, ತಮಗೆ ತಕ್ಕ ರಾಜ್ಯಕ್ರಮವನ್ನು ತಾವೇ ಸ್ವತಃ ಕಂಡುಹಿಡಿದು ಸ್ಥಾಪಿಸಿಕೊಳ್ಳುವ ಶಕ್ತಿಯನ್ನು ಅವರಿಗೆ ಉಂಟುಮಾಡಿಕೊಡುವ ವಿಧಾನವೊಂದರಲ್ಲಿಯೇ ದೇಶೀಯರ ರಾಜಕೀಯೋನ್ನತಿಗೆ ತಳಹದಿಯಿರುವುದು."

ಈ ಬರೆವಣಿಗೆಯ ಕಾರಣದಿಂದ ಬೇಕಾದಷ್ಟು ರಗಳೆ ಜರುಗಿತು. ಇಂಡಿಯಾದೇಶದಲ್ಲಿಯೇ ಅಲ್ಲದೆ ಇಂಗ್ಲೆಂಡಿನಲ್ಲಿಯೂ ಮುಖ್ಯವಾದ ವರ್ತಮಾನ ಪತ್ರಿಕೆಗಳಲ್ಲಿ ಅದರ ವಿಷಯವಾಗಿ ಜಿಜ್ಞಾಸ ಬೆಳೆಯಿತು. ಇಂಡಿಯಾ ಸರಕಾರದವರೂ ಅವರ ಉಪಜೀವಿಗಳೂ ಅದರ ದೆಸೆಯಿಂದ ಕೋಪೋದ್ದೀಪಿತರಾದರು. ಆ ಪುಸ್ತಕದ ಮೇಲ್ಗಡೆ ರಂಗಾಚಾರ್ಯರು ಹೆಸರು ಕೊಡದೆ, "ಒಬ್ಬ ಮೈಸೂರು ದೇಶೀಯನಿಂದ ವಿರಚಿತ

ವಾದುದು'' ಎಂದು ಮಾತ್ರ ಹೇಳಿದ್ದರಾದರೂ, ಅದನ್ನು ಬರೆದವರು ಅವರೇ ಎಂಬುದು ಹೇಗೋ ಮೇಲಣ ಅಧಿಕಾರಿಗಳಿಗೆ ತಿಳಿದು ಬಂದಿತು. ಅದು ನಿಶ್ಚಯವೆ?—ಎಂದು ಕಮಿಷನರ್ ಸರ್ ರಿಚರ್ಡ್ ಮೀಡ್ ಅವರು ರಂಗಾಚಾರ್ಯರನ್ನು ಪ್ರಶ್ನಿಸಲು, ಅವರು ಸ್ವಲ್ಪವೂ ಹಿಂದೆಗೆಯದೆ ಆ ಪ್ರಬಂಧದ ಜವಾಬ್ದಾರಿ ತಮ್ಮದೇ ಎಂದು ಒಪ್ಪಿ ಕೊಂಡರು. ಅದರ ಮೇಲೆ ಸ್ವಲ್ಪವಾಗಿ ಪತ್ರಿಕಾಪ್ರಸಂಗ ಜರುಗಿ, ಕಡೆಗೆ ಸರಕಾರೀ ಉದ್ಯೋಗದಲ್ಲಿರುವವರು ಆ ರೀತಿ ಬಹಿರಂಗವಾಗಿ ರಾಜ್ಯ ವಿಷಯಗಳಲ್ಲಿ ವ್ಯಾಖ್ಯಾನ ಮಾಡಲಾಗದೆಂದೂ, ರಂಗಾ ಚಾರ್ಯರು ಹಾಗೆ ಮಾಡಿದುದು ಅನುಚಿತವೆಂದೂ ಅವರಿಗೆ ಇಂಡಿಯಾ ವೈಸ್‌ರಾಯವರು ಮೈಸೂರು ಕಮಿಷನರ ಮೂಲಕ ತಿಳಿಯಪಡಿ ಸಿದರು.

ರಂಗಾಚಾರ್ಯರು ಬರೆದಿದ್ದುದರಲ್ಲಿ ಅನೃತವೂ ಅಬದ್ಧವೂ ಏನಾದರೂ ಇದ್ದಿದ್ದರೆ ಅವರ ಮೇಲಿನ ಆಗ್ರಹವು ಅಷ್ಟು ಸುಲಭವಾಗಿ ಹೋಗುತ್ತಿರಲಿಲ್ಲ. ಅವರ ಆಕ್ಷೇಪಣೆಗೆ ಸಿಕ್ಕಿ ರೋಷಾವಿಷ್ಟರಾಗಿದ್ದ ಆಂಗ್ಲೇಯಾಧಿಕಾರಿಗಳು ಅವರಲ್ಲಿ ನಿಜವಾದ ದೊಡ್ಡತಪ್ಪಾವುದಾದರೂ ಸಿಕ್ಕಿದ್ದಿದ್ದರೆ, ಅವರ ಉದ್ಯೋಗಕ್ಕೇ ಅಪಾಯವನ್ನುಂಟು ಮಾಡ ಬಹುದಾಗಿತ್ತು. ಆದರೆ ಹಾಗಾಗುವುದಕ್ಕೆ ಪ್ರತಿಯಾಗಿ ರಂಗಾ ಚಾರ್ಯರಿಗೆ ಆಮೇಲೆಯೂ ಎಂದಿನಂತೆ ಮನ್ನಣೆಯೇ ಉಂಟಾಯಿತು.

೧೮೭೮ನೆಯ ಏಪ್ರಿಲ್ ತಿಂಗಳಲ್ಲಿ ಗಾರ್ಡನ್ ಸಾಹೇಬರವರು ಗಾರ್ಡಿಯನ್ (ಪೋಷಕ) ಪದವಿಯಿಂದ ಚೀಫ್-ಕಮಿಷನರ್ ಹುದ್ದೆಗೆ ವರ್ಗಾಯಿಸಲ್ಪಡಲು, ಅವರ ಪೂರ್ವ ಸ್ಥಾನಕ್ಕೆ,—ರಂಗಾಚಾರ್ಯರು ಹಿಂದೆಯೇ ಸಲಹೆ ಕೊಟ್ಟಿದ್ದಂತೆ,—ಮದ್ರಾಸು ಸೀಮೆಯಲ್ಲಿ (ಕುಂಭ ಕೋಣದ ಕಾಲೇಜಿನಲ್ಲಿ) ಉತ್ತಮ ಬೋಧಕರೆಂದು ಹೆಸರು ಹೊಂದಿದ್ದ ಗುಣಾಢ್ಯರಾದ ಪೋರ್ಟರ್ ಅವರನ್ನು ನಿಯಮಿಸಿದರು.

ಮಾರನೆಯ ವರ್ಷ (೧೮೭೯ನೆಯ ಮೇ) ಗಾರ್ಡನ್‌ರವರು ರಂಗಾಚಾರ್ಯರನ್ನು ತಮ್ಮ ರೆವೆನ್ಯೂ ಸೆಕ್ರೆಟರಿಯಾಗಿ ನಿಯಮಿಸಿ ಕೊಂಡರು. ಅವರಿಬ್ಬರೂ ಒಟ್ಟಿಗೆ ರಾಜ್ಯಭಾರ ಕ್ರಮದಲ್ಲಿ ಅನೇಕ

ತಿದ್ದುಪಾಟುಗಳನ್ನು ನಡೆಯಿಸಿ, ರಾಜ್ಯದ ಖರ್ಚು ಬಾಬನ್ನು ತಗ್ಗಿಸಿದರು. ರೂ. ೧,೦೦೦ದಿಂದ ರೂ. ೧,೬೬೬ವರೆಗೂ ಇದ್ದ ಡೆಪ್ಯುಟಿ ಕಮಿಷನರುಗಳ ಸಂಬಳವನ್ನು ರೂ. ೭೦೦ರಿಂದ ೧,೦೦೦ವರೆಗೂ ಇಳಿಸಿದರು. ೨೭ ಮಂದಿ ಅಸಿಸ್ಟೆಂಟು ಕಮಿಷನರುಗಳ ಪೈಕಿ ೮ ಮಂದಿ ಅನಾವಶ್ಯಕವಾಗಿದ್ದವರನ್ನು ತೆಗೆದುಹಾಕಿದರು. ವಿದ್ಯಾಭ್ಯಾಸ, ಜಂಗಲ್ (ಫಾರೆಸ್ಟು), ಮರಾಮತ್—ಮೊದಲಾದ ಎಲ್ಲಾ ಇಲಾಖೆಗಳಲ್ಲಿಯೂ ಹೆಚ್ಚು ಸಂಬಳದ ಆಂಗ್ಲೇಯಾಧಿಕಾರಿಗಳನ್ನು ತೆಗೆದುಹಾಕಿ, ಸಾಮಾನ್ಯ ವೇತನದ ಸಮರ್ಥರಾದ ದೇಶೀಯರನ್ನೇ ನಿಯಮಿಸಿದರು.

ಈ ರೀತಿ ದೇಶೀಯರಿಗೆ ಪ್ರೋತ್ಸಾಹಕೊಟ್ಟು, ಅವರನ್ನಭಿವೃದ್ಧಿಗೆ ತರಬೇಕೆಂಬುದು ರಂಗಾಚಾರ್ಯರ ಮುಖ್ಯೋದ್ದೇಶವಾಗಿತ್ತು. ಏಕೆಂದರೆ, ಸರಕಾರವು ಮಾಡಬಹುದಾದ ಉಪಕಾರಗಳಲ್ಲಿ ಉದ್ಯೋಗಗಳನ್ನು ಕೊಡುವುದೂ ಅತಿ ಮುಖ್ಯವಾದ ಒಂದು. ಈ ಉಪಕಾರವನ್ನು, ಯಾರು ರಾಜ್ಯದ ಸ್ಥಿರ ಪ್ರಜೆಯಾಗಿದ್ದುಕೊಂಡು, ಕಂದಾಯಕವಳಿಗೆ ಕೊಡುವುದರ ಮೂಲಕ ಸರಕಾರಕ್ಕೆ ಆಧಾರವಾಗಿರುವರೋ ಅವರು ಅನುಭವಿಸಬೇಕಲ್ಲದೆ, ಕೂಲಿಗಾಗಿ ಇಲ್ಲಿಗೆ ಬಂದು ಕೆಲವು ವರ್ಷಗಳ ಕಾಲ ಮಾತ್ರ ಇಲ್ಲಿದ್ದು ಸ್ವಸ್ಥಾನಕ್ಕೆ ಹಿಂದಿರುಗಿಹೋಗುವವರು ಅದಕ್ಕೆ ಎಷ್ಟು ಮಾತ್ರವೂ ಅರ್ಹರಲ್ಲ. ಹೊರಗಿನವರಿಗೆ ರಾಜ್ಯದ ಸುಖದುಃಖಗಳು ಅಷ್ಟೇನೂ ಬೇಕಾಗಿರುವುದಿಲ್ಲ. ಅವರು ಪ್ರಜೆಗಳೊಡನೆ ಕಲೆತು ಅವರ ಮನಸ್ಸನ್ನೂ ತಿಳಿಯಲಾರರು. ಆದುದರಿಂದ ಕೂಡಿದ ಮಟ್ಟಿಗೂ ಎಲ್ಲಾ ರಾಜ್ಯಾಧಿಕಾರಗಳಿಗೂ ದೇಶೀಯರನ್ನೇ ತರಬೇತುಮಾಡಿ ನಿಯಮಿಸಬೇಕೆಂದು ರಂಗಾಚಾರ್ಯರು ನಿಶ್ಚಯಿಸಿದ್ದರು. ಈ ವಿಧವಾದ ಅವರ ಏರ್ಪಾಡುಗಳಿಂದ ದೇಶೀಯರ ಸ್ಥಿತಿಯು ಉತ್ತಮಗೊಳ್ಳಲು ಮೊದಲಾಯಿತಲ್ಲದೆ, ರಂಗಾಚಾರ್ಯರು ಸೆಕ್ರೆಟರಿಯಾದ ೧೮೭೯–೮೦ನೆಯ ವರ್ಷದಲ್ಲಿ ರಾಜ್ಯದ ಖರ್ಚು ಕಳೆದು ಎರಡೂವರೆ ಲಕ್ಷ ರೂಪಾಯಿಗಳು ಖಜಾನೆಯಲ್ಲಿ ಶಿಲ್ಕು ನಿಂತುವು. ರಂಗಾಚಾರ್ಯರು ತೋರಿಸಿದ ಮೆಹನತ್ತನ್ನು ಇಂಡಿಯಾ ಸರಕಾರದವರು

ಮೆಚ್ಚಿ ೧೮೮೦ರಲ್ಲಿ ಅವರಿಗೆ "ಸಿ.ಐ.ಇ." (ಕಂಪ್ಯಾನಿಯನ್ ಆಫ್ ದಿ ಆರ್ಡರ್ ಆಫ್ ದಿ ಇಂಡಿಯನ್ ಎಂಪೈರ್—ಇಂಡಿಯಾ ಚಕ್ರಾಧಿಪತ್ಯದ ಸನ್ಮಾನ ಸರಣಿಯ ಸದಸ್ಯರು) ಎಂಬ ಬಿರುದನ್ನು ದಯಪಾಲಿಸಿದರು.

ರಂಗಾಚಾರ್ಯರಿಗೆ ಕೆಲವು ಮಂದಿ ಶತ್ರುಗಳಾಗಿದ್ದರೆಂಬುದನ್ನು ಮೇಲೆ ಸೂಚಿಸಿದೆ. ಅರಮನೆಗೆ ಸಾಲಕೊಟ್ಟಿದ್ದು ಒಂದಕ್ಕೆರಡಾಗಿ ಬಡ್ಡಿ ಸೆಳೆಯುತ್ತಿದ್ದವರೂ, ಉಗ್ರಾಣದ ಹೆಗ್ಗಣಗಳಂತೆ ಅರಮನೆಯ ಬೊಕ್ಕಸವನ್ನು ಬರಿದು ಮಾಡುತ್ತಿದ್ದವರೂ, ಅರಮನೆಯಲ್ಲಿ ಪಿತೂರಿ ಮಾಡಿ ಹೊಟ್ಟೆ ಹೊರೆದುಕೊಳ್ಳುತ್ತಿದ್ದವರೂ, ರಂಗಾಚಾರ್ಯರ ಪ್ರಾಬಲ್ಯವನ್ನು ಕಂಡು ಸಹಿಸಲಾರದವರೂ, ಅವರನ್ನು ಕೆಳಕ್ಕೆಳೆದು ಅವರ ಪದವಿಗೆ ತಾವು ಹತ್ತಬೇಕೆಂದಿದ್ದವರೂ—ಎಲ್ಲರೂ ಸೇರಿ ಕೆಲವು ದಿನಗಳಿಂದ ರಂಗಾಚಾರ್ಯರ ಮೇಲೆ ದೂರು ಹೊರಿಸಲು ಯತ್ನಿಸುತ್ತಿದ್ದರು. ಅರಮನೆಗೆ ಸೇರಿದ ಬಹು ಬೆಲೆಯುಳ್ಳ ಕೆಲವು ಆಭರಣಗಳು ೧೮೭೭–೭೮ರಲ್ಲಿ ಕಳುವಾದುವೆಂದೂ, ರಂಗಾಚಾರ್ಯರೇ ಅದಕ್ಕೆ ಜವಾಬುದಾರರೆಂದೂ ಅವರು ೧೮೭೯–೮೦ರಲ್ಲಿ ಕೂಗಾಡ ಲಾರಂಭಿಸಿದರು. ಏಕೆಂದರೆ, ಸಂಸ್ಥಾನವನ್ನು ಮಹಾರಾಜರಿಗೊಪ್ಪಿಸುವ ಕಾಲವು ಈಗ ಸಮೀಪಿಸಿತ್ತು. ದಿವಾನ್ ಪದವಿಗೆ ರಂಗಾಚಾರ್ಯರೇ ನಿಯಮಿತರಾದಾರೇನೋ ಎಂಬ ಅಸೂಯೆ ಭೀತಿಗಳೇ ಈ ಕೂಗಾಟದ ಕಾರಣವೆಂಬುದನ್ನು ಹೇಳಬೇಕಾದುದಿಲ್ಲ. ರಂಗಾಚಾರ್ಯರಲ್ಲಿ ಅಭಿಮಾನಿಗಳಾಗಿದ್ದ ಬೌರಿಂಗ್ ಸಾಹೇಬರಿಗೂ ಕೂಡ ಅವರ ವಿಷಯದಲ್ಲಿ ಶಂಕೆ ಹುಟ್ಟುವಂತಾಯಿತು. ಆದರೆ ನಿಷ್ಪಕ್ಷಪಾತಿಗಳಾದ ಗಾರ್ಡನ್ ಮೊದಲಾದ ಅಧಿಕಾರಿಗಳು ಈ ವಿಷಯವನ್ನು ಚೆನ್ನಾಗಿ ಪರೀಕ್ಷಿಸಿ, ಆ ಅಪವಾದವು ಕೃತ್ರಿಮವೆಂದೂ, ರಂಗಾಚಾರ್ಯರ ನಡತೆಯು ನಿರ್ದುಷ್ಟವಾದುದೆಂದೂ ತೋರಿಸಿದರು. ಬೌರಿಂಗ್ ಸಾಹೇಬರೂ ಸಹ ಕಾಲಕ್ರಮದಲ್ಲಿ ತಮ್ಮ ಶಂಕೆಯನ್ನು ತೊರೆದು, ರಂಗಾಚಾರ್ಯರಲ್ಲಿ ಅತಿಶಯವಾದ ಪ್ರೀತಿ ಗೌರವಗಳನ್ನು ಸೂಚಿಸಿ, ಅವರ ಸದ್ಗುಣಗಳನ್ನು ಬಹುವಾಗಿ ಶ್ಲಾಘಿಸಿದರು.

# ಪರಿಚ್ಛೇದ ೫

## ದಿವಾನ್ ಪದವಿ—ರಾಜ್ಯದ ಸ್ಥಿತಿ—ಆಡಳಿತದಲ್ಲಿ ತಿದ್ದುಪಾಟುಗಳು—ಕೃಷಿ ವಾಣಿಜ್ಯಾಭಿವರ್ಧಕ ಸಭೆ—ರೆಯಿಲು ದಾರಿಗಳ ಯೋಜನೆ

"ಸ ಕಿಂಸಖಾ ಸಾಧು ನ ಶಾಸ್ತಿ ಯೋऽಧಿಪಂ ।
ಹಿತಾನ್ ನ ಯಸ್ಸಂಶೃಣುತೇ ಸ ಕಿಂಪ್ರಭುಃ ॥
ಸದಾನುಕೂಲೇಷು ಹಿ ಕುರ್ವತೇ ರತಿಂ ।
ನೃಪೇಷ್ವಮಾತ್ಯೇಷು ಚ ಸರ್ವ ಸಂಪದಃ ॥"

—ಕಿರಾತಾರ್ಜುನೀಯ.

"ಯಾವ ಮಂತ್ರಿಯು ರಾಜನನ್ನು ಸರಿಯಾದ ಹದ್ದಿನಲ್ಲಿಡುವುದಿಲ್ಲವೋ ಅವನು ಉತ್ತಮ ಮಂತ್ರಿಯಲ್ಲ. ಯಾವ ರಾಜನು ಮಂತ್ರಿಯ ಹಿತೋಪದೇಶವನ್ನು ವಿಶ್ವಾಸದಿಂದ ಲಾಲಿಸುವುದಿಲ್ಲವೋ ಅವನು ಉತ್ತಮ ರಾಜನಲ್ಲ. ರಾಜಮಂತ್ರಿಗಳಿಬ್ಬರೂ ಪರಸ್ಪರ ಅನುಕೂಲರಾಗಿರುವ ಕಡೆ ಎಲ್ಲ ಸಂಪತ್ತುಗಳೂ ನೆಲಸಿರುವುವು."

"Governments wishing to adjust their expenditure to the revenue should direct their efforts to a proper retrenchment of the expenditure, rather than depend on any vague expectation of deriving an increase of revenue from an impoverished country. Any such large increase could only result from another great impetus to industry."

—*Rangacharlu.*

"ಆದಾಯವ್ಯಯಗಳನ್ನು ಸರಿಪಡಿಸಬೇಕೆಂದಿರುವ ಸರಕಾರವು, ಬಡತನದಲ್ಲಿರುವ ದೇಶದಿಂದ ಹೆಚ್ಚು ಉತ್ಪತ್ತಿಯನ್ನು ಪಡೆಯಬಹುದೆಂದು ಆಶಿಸುವುದಕ್ಕಿಂತಲೂ ತನ್ನ ವೆಚ್ಚವನ್ನು ಕಡಿಮೆಮಾಡಿಕೊಳ್ಳುವುದು ಒಳ್ಳೆಯದು. ಕೃಷಿ ಕಸಬು ಕೈಗಾರಿಕೆಗಳಿಗೆ ಉತ್ತೇಜನ ಕೊಡುವುದೇ ರಾಜ್ಯವು ವರಮಾನವನ್ನು ನಿಜವಾಗಿ ಹೆಚ್ಚಿಸಿಕೊಳ್ಳುವ ಮಾರ್ಗ."

—ರಂಗಾಚಾರ್ಯರ ಮತ.

ಶ್ರೀ ಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ. ಎಸ್.ಐ., ಅವರು ೧೮೮೧ರ ಮಾರ್ಚಿ ೨೫ನೆಯ ಶುಭ ದಿನದಲ್ಲಿ ಶ್ರೀಮನ್ಮಹೀಶೂರ ಸಂಸ್ಥಾನದ ರಾಜ್ಯಭಾರವನ್ನು ಸ್ವತಃ ವಹಿಸಿಕೊಂಡು,

ಆ ದಿನವೇ ರಂಗಾಚಾರ್ಯರನ್ನು ತಮ್ಮ ದಿವಾನ್ ಪದವಿಗೆ ನಿಯಮಿಸಿದರು. ಆ ಕಾಲಕ್ಕೆ ಹಿಂದಿದ್ದ ಆಂಗ್ಲೇಯಾಧಿಕಾರಿಗಳ ಸಂಬಳ ಸಾರಿಗೆಗಳಿಗಾಗಿ ತೆತ್ತು ರಾಜ್ಯದ ಭಂಡಾರವು ಬತ್ತಿಹೋಗಿತ್ತು. "ದುರ್ಭಿಕ್ಷದಲ್ಲಿ ಅಧಿಕಮಾಸ"ವೆಂಬಂತೆ ಧಾತು–ಈಶ್ವರ ಸಂವತ್ಸರಗಳ (೧೮೭೬–೭೭) ಕ್ಷಾಮವು ಪ್ರಜೆಗಳನ್ನು ಸೂರೆಗೊಂಡಿತ್ತು. ದೇಶದಲ್ಲಿ ಕೃಷಿ ಕೈಗಾರಿಕೆಗಳು ಹಾಳಾಗಿದ್ದುವು. ೧೮೭೮ರಿಂದ ೮೦ರವರೆಗೆ ರಂಗಾಚಾರ್ಯರು ಮಾಡಿಸಿದ ಏರ್ಪಾಡುಗಳಿಂದ ಖರ್ಚು ಕಡಿಮೆಯಾಗಿದ್ದರೂ, ಕ್ಷಾಮನಿವಾರಣೆಗಾಗಿಯೂ 'ಪೆನ್‌ಷನ್' ಮೊದಲಾದವುಗಳಿಗಾಗಿಯೂ ವೆಚ್ಚ ಹೆಚ್ಚಾಯಿತು. ಕ್ಷಾಮಕಾಲದಲ್ಲಿ ಬ್ರಿಟಿಷ್ ಸರಕಾರದಿಂದ ಸಾಲವಾಗಿ ತೆಗೆದಿದ್ದ ೮೦ ಲಕ್ಷದ ಮೇಲೆ, ಪ್ರತಿ ವರ್ಷವೂ ೪ ಲಕ್ಷ ರೂಪಾಯಿಗಳಷ್ಟು ಬಡ್ಡಿಯನ್ನು ಕೊಡಬೇಕಾಗಿತ್ತು. ಇವಕ್ಕೆಲ್ಲ ತಕ್ಕ ಆದಾಯದ ದಾರಿ ಮಾತ್ರ ಯಾವುದೂ ಇರಲಿಲ್ಲ. ರಾಜ್ಯದ ವರುಮಾನವು ೧೮೭೪–೭೫ರಲ್ಲಿ ೧೦೯॥ ಲಕ್ಷ ಇದ್ದುದು ೧೮೮೦–೮೧ರಲ್ಲಿ ೧೦೧ ಲಕ್ಷಕ್ಕೆ ಇಳಿಯಿತು. ಪ್ರಜೆಗಳು ದಾರಿದ್ರ್ಯದಲ್ಲಿದ್ದ ಕಾರಣ, ಹೊಸ ತೆರಿಗೆಗಳನ್ನು ಹಾಕಲು ಅವಕಾಶವಿರಲಿಲ್ಲ. ಇಷ್ಟು ಸಾಲದೆ, ಮೇಲೆ ಹೇಳಿದಂತೆ, ರಂಗಾಚಾರ್ಯರಿಗೆ ಬೇಕಾದಷ್ಟು ಮಂದಿ ವಿರೋಧಿಗಳಿದ್ದರು. ಯಾವ ವಿಧದಿಂದಲಾದರೂ ಅವರಿಗೆ ಕೆಡಕುಮಾಡಬೇಕೆಂದು ಅವರು ಸಮಯವನ್ನು ಹೊಂಚಿ ಕಾಯುತ್ತಿದ್ದರು. ಈ ಅನೇಕ ಪ್ರತಿಕೂಲಗಳನ್ನು ಲೆಕ್ಕಿಸದೆ ಮಂತ್ರಿಕಾರ್ಯದ ಜವಾಬ್ದಾರಿಯನ್ನು ವಹಿಸುವುದರಲ್ಲಿ ರಂಗಾಚಾರ್ಯರಿಗಿದ್ದುದು ಒಂದೇ ಭರವಸೆ. ಆ ಭರವಸೆಯು ಪ್ರಭುವಾದ ಮಹಾರಾಜರವರನ್ನು ಆಶ್ರಯಿಸಿತ್ತು. ದಯಾಳುಗಳೂ, ಕ್ಷಮಾವಂತರೂ, ಪ್ರಜ್ಞಾವಂತರೂ, ರಾಜನೀತಿವಿಶಾರದರೂ ಆಗಿದ್ದ ಶ್ರೀಮನ್ಮಹಾರಾಜರವರು—ಆಗತಾನೆ ರಾಜ್ಯಯಂತ್ರವನ್ನು ನಡೆಯಿಸಲು ಆರಂಭಿಸಿ, ಸ್ವಲ್ಪ ವಯಸ್ಸಿನವರಾಗಿ ಅನುಭವವಿಲ್ಲದವರಾಗಿದ್ದರೂ—ಯುಕ್ತಾಯುಕ್ತ ಪರಿಜ್ಞಾನವುಳ್ಳವರಾಗಿ, ರಂಗಾಚಾರ್ಯರ ಸಮಯೋಚಿತವಾದ ಸಲಹೆಗಳನ್ನು ಅನುಮೋದಿಸಿ, ಅವರಿಗೆ ತಕ್ಕ ಪ್ರೋತ್ಸಾಹವನ್ನೂ, ಬೆಂಬಲವನ್ನೂ ಕೊಡತಕ್ಕವರಾಗಿದ್ದರು.

ಕಮಿಷನ್ ಆಧಿಪತ್ಯದ ಕಡೆಯ ದಿನಗಳಲ್ಲಿ ಪ್ರಾರಂಭವಾಗಿದ್ದ ಬದಲಾವಣೆಗಳನ್ನು ರಂಗಾಚಾರ್ಯರು ಪೂರ್ತಿಗೊಳಿಸಲು ಉಪಕ್ರಮಿಸಿದರು. ಕೆಲವು ಡಿಸ್ಟ್ರಿಕ್ಟು ಮತ್ತು ತಾಲ್ಲೂಕುಗಳ ಮೇರೆಗಳು ಬದಲಾಯಿಸಲ್ಪಟ್ಟವು. ೯ ತಾಲ್ಲೂಕುಗಳು ಸಬ್-ತಾಲ್ಲೂಕುಗಳಾಗಿ ಮಾಡಲ್ಪಟ್ಟವು. ೪ ಮುನ್‌ಸಿಫ್ ಕೋರ್ಟುಗಳೂ, ೩ ಸಬ್-ಕೋರ್ಟುಗಳೂ, ೫ ಡಿಸ್ಟ್ರಿಕ್ಟು ಜೈಲುಗಳೂ, ಕೆಲವು ಮುಸಾಫರ ಬಂಗಲೆಗಳ ಶಿಬ್ಬಂದಿಗಳೂ ವಜಾ ಆದವು. ಈ ಬಗೆಯ ಏರ್ಪಾಟಿನಿಂದ ವರ್ಷಕ್ಕೆ ಸುಮಾರು ೨ ಲಕ್ಷದಂತೆ ಸರಕಾರಕ್ಕೆ ಮಿಕ್ಕಿತು. ಫಾರೆಸ್ಟ್ ಅಥವಾ ಕಾಡುಗಳ ಇಲಾಖೆಯ ಆದಾಯವು ಅವುಗಳ ವಿಸ್ತೀರ್ಣಕ್ಕೆ ತಕ್ಕಂತೆ ಇರಲಿಲ್ಲ. ಗಂಧದ ಮರವೆಲ್ಲವೂ ಅರಮನೆಗೆ ಸೇರಿ ಅಲ್ಲಿಯೇ ನಷ್ಟವಾಗಿ ಹೋಗುತ್ತಿತ್ತು. ರಂಗಾಚಾರ್ಯರು ಈ ಬಾಬಿಗೆ ತಮ್ಮ ಗಮನವನ್ನು ತಿರುಗಿಸಿ, ಅದರಿಂದ ಹೆಚ್ಚು ಹುಟ್ಟುವಳಿಯಾಗುವಂತೆ ಮಾಡಿದರು.

ರಂಗಾಚಾರ್ಯರು ಈ ವಿವಿಧೋಪಾಯಗಳಿಂದ ಹಣವನ್ನು ಕೂಡಿಟ್ಟು, ಮೈಸೂರು ರೆಯಿಲನ್ನು ಪೂರ್ತಿಗೊಳಿಸಿದರು. ಕಸಬು ಕೈಗಾರಿಕೆಗಳು ಅಭಿವೃದ್ಧಿಗೆ ಬರಬೇಕಾದರೆ, ಜನರೂ, ಜಿನಸಿಗಳೂ ಸ್ಥಳದಿಂದ ಸ್ಥಳಕ್ಕೆ ಧಾರಾಳವಾಗಿ ಹೋಗಿಬರಲು ರೆಯಿಲುದಾರಿಗಳಿರಬೇಕಾದುದು ಎಷ್ಟು ಆವಶ್ಯಕವೆಂಬುದನ್ನು ಅವರು ಚೆನ್ನಾಗಿ ತಿಳಿದಿದ್ದರು. ಆ ಕಾಲದಲ್ಲಿ ಮೈಸೂರು ದೇಶದಲ್ಲಿ ವ್ಯವಸಾಯಕ್ಕೆ ಯೋಗ್ಯವಾದ ಭೂಮಿಯು ವಿಶೇಷವಾಗಿದ್ದು ತಕ್ಕ ಜಲವಸತಿಯೂ ಇದ್ದರೂ, ಬಹುಭಾಗದಲ್ಲಿ ಜಮೀನು ಬೇಸಾಯವಿಲ್ಲದೆ ಬಂಜರಾಗಿತ್ತು. ಇನ್ನು ಕೆಲವು ಭಾಗ ಸಾಗುವಳಿಯಲ್ಲಿದ್ದರೂ ತೃಪ್ತಿಕರವಾದ ಸ್ಥಿತಿಯಲ್ಲಿರಲಿಲ್ಲ. ಹಿಂದಿನ ಕ್ಷಾಮ ಬಾಧೆಯಿಂದಲೂ ಇತರ ಕಾರಣಗಳಿಂದಲೂ ರೈತರ ಸಂಖ್ಯೆಯು ಕಡಿಮೆಯಾಗಿ, ಇದ್ದವರೂ ನಿರುತ್ಸಾಹಿಗಳಾಗಿ, ಅವರ ಸ್ಥಿತಿಯು ಬಹು ದೀನವಾಗಿದ್ದಿತು. ಆದುದರಿಂದ, ಬೇರೆ ಬೇರೆ ಭಾಗಗಳ ಜನರು ಒಂದು ಪ್ರಾಂತದಿಂದ ಮತ್ತೊಂದು ಪ್ರಾಂತಕ್ಕೆ ಹೋಗಿಬರಲು ಅನುಕೂಲ್ಯಗಳುಂಟಾದ ಹೊರತು ಸಂಸ್ಥಾನ

ದಲ್ಲಿ ಭೂವ್ಯವಸಾಯವೂ, ಅದನ್ನನುಸರಿಸುವ ವ್ಯಾಪಾರ ಕೈಗಾರಿಕೆ ಗಳೂ ಅಭಿವೃದ್ಧಿಗೆ ಬರುವಂತಿರಲಿಲ್ಲ. ಆದುದರಿಂದಲೇ ರಂಗಾ ಚಾರ್ಯರು, ರಾಜ್ಯದ ಭಂಡಾರವು ಬರಿಯದಾಗಿದ್ದರೂ, ಬಹು ಮಿತ ವ್ಯಯದಿಂದ, ರಾಜ್ಯದ ಆಡಳಿತಕ್ಕೂ ಇತರ ಸೌಕರ್ಯಗಳಿಗೂ ಕುಂದಕ ಬಾರದ ರೀತಿಗಳಲ್ಲಿ ದ್ರವ್ಯವನ್ನು ಉಳಿಸಿ, ಅದನ್ನು ರೆಯಿಲು ಕೆಲಸಕ್ಕೆ ಉಪಯೋಗಿಸಿದರು. ದೇಶದಲ್ಲೆಲ್ಲಾ ರೆಯಿಲಿನ ಬಲೆಯನ್ನು ಹರಡ ಬೇಕೆಂದು ಅವರಿಗೆ ಬಲವಾದ ಕುತೂಹಲವಿದ್ದಿತು. ಆಗ ತಾವು ಉದ್ದೇಶಿಸಿದ್ದ ರೆಯಿಲಿನ ಕೆಲಸವು ಮುಗಿಯುವವರೆಗೂ ಅದರ ಖರ್ಚಿ ಗಾಗಿ ವರ್ಷಂಪ್ರತಿ ೫ ಲಕ್ಷ ರೂಪಾಯಿಯನ್ನು ವಿನಿಯೋಗಿಸ ಬೇಕೆಂದು ಒಂದು ಸಲ ಅವರು ಪ್ರಜಾಪ್ರತಿನಿಧಿಸಭೆಗೆ* ತಿಳಿಸಿದರು. ಅವರ ಅಭಿಪ್ರಾಯಗಳು ಮುಂದಿನ ಪುಟಗಳಲ್ಲಿ ವಿವರಿಸಲ್ಪಟ್ಟಿವೆ.

ಆಗ ಮೈಸೂರು ಸರಕಾರವು ಬ್ರಿಟಿಷ್ ಸರಕಾರಕ್ಕೆ (ಹಿಂದೆ ಸೂಚಿಸಿದಂತೆ) ೮೦ ಲಕ್ಷ ರೂಪಾಯಿಗಳ ವರೆಗೆ ಋಣಿಯಾಗಿತ್ತು. ಈ ಸಾಲವನ್ನು ತೀರಿಸಬೇಕೆಂದು ಆ ಸರಕಾರವು ಯಾವಾಗಬೇಕಾದರೂ ಕೇಳಬಹುದಾಗಿತ್ತು. ದೇಶವು ಆಗಿದ್ದ ಸ್ಥಿತಿಯಲ್ಲಿ ಹಾಗೆ ಕೇಳಿಬಿಟ್ಟಿ ದ್ದರೆ ಅದರಿಂದ ಮೈಸೂರು ಸರಕಾರಕ್ಕೆ ಬಹು ಕಷ್ಟವಾಗುತ್ತಿತ್ತು. ಪ್ರಜೆಗಳು ಆಗತಾನೆ ದುರ್ಭಿಕ್ಷದ ಹೊಡೆತದಿಂದ ಚೇತರಿಸಿಕೊಳ್ಳುತ್ತಿ ದ್ದರು. ಹೊಸ ತೆರಿಗೆಗಳನ್ನು ಹಾಕುವುದು ಸಾಧ್ಯವೇ ಇರಲಿಲ್ಲ. ರಂಗಾಚಾರ್ಯರು ಇದನ್ನೆಲ್ಲಾ ಪರ್ಯಾಲೋಚಿಸಿ, ಈ ವಿಷಯ ದಲ್ಲಿ ಬ್ರಿಟಿಷ್ ಸರಕಾರದೊಡನೆ ಪತ್ರಪ್ರಸಂಗ ಬೆಳೆಸಿದರು. ದೇಶದ ಬಡತನವನ್ನೂ, ಹಿಂದಿನ ಕ್ಷಾಮಕಾಲದಲ್ಲಿ—ದೇಶವು ಕಮಿಷನರ ಆಳಿಕೆಯಲ್ಲಿದ್ದಾಗ—ಆಗಿನ ಅಧಿಕಾರಿಗಳು ಕ್ಷಾಮನಿವಾರಣೆಯ ನೆವ ದಿಂದ ದುಂದುವೆಚ್ಚ† ಮಾಡಿದರೆಂಬುದನ್ನೂ, ಇತರ ಕಾರಣಗಳನ್ನೂ ರಂಗಾಚಾರ್ಯರು ಬ್ರಿಟಿಷ್ ಸರಕಾರಕ್ಕೆ ವಿಶದವಾಗಿ ತಿಳುಹಿಸಿದ

---

* ಪ್ರಜಾಪ್ರತಿನಿಧಿ ಸಭೆಯ ಚರಿತ್ರೆಯು ಮುಂದಿನ ಅಧ್ಯಾಯದಲ್ಲಿ ಕೊಡ ಲ್ಪಟ್ಟಿದೆ.

† ಈ ಸಂಗತಿಯನ್ನು ಗವರ್ನರ್ ಜನರಲ್ ಲಾರ್ಡ್ ಲಿಟ್ಟನರವರೇ ಒಪ್ಪಿಕೊಂಡರು.

ಮೇಲೆ, ಆ ಸರಕಾರದವರು ರಂಗಾಚಾರ್ಯುರ ಇಷ್ಟದಂತೆ ಕೆಲವು ಅನುಕೂಲಗಳನ್ನು ಮಾಡಿಕೊಡಲು ಒಪ್ಪಿದರು. ಬಡ್ಡಿಯ ದರವು ಶೇಕಡಾ ೫ರಿಂದ ೪ಕ್ಕೆ ಇಳಿಸಲ್ಪಟ್ಟಿತಲ್ಲದೆ, ಸಾಲವು ವರ್ಷ ಒಂದಕ್ಕೆ ೪ ಲಕ್ಷದಂತೆ ೪೧ ಕಂತುಗಳಲ್ಲಿ ತೀರಿಸಲ್ಪಡಬೇಕೆಂದು ಗೊತ್ತಾಯಿತು.

ರಂಗಾಚಾರ್ಯುರು ಇಷ್ಟರಿಂದಲೇ ತೃಪ್ತರಾಗಲಿಲ್ಲ. ಬ್ರಿಟಿಷ್ ಸರಕಾರದವರ ಅನುಮತಿಯನ್ನು ಪಡೆದು ೨೦ ಲಕ್ಷ ರೂಪಾಯಿಗಳನ್ನು ಕಡವಾಗಿ ತೆಗೆದು, ಬೆಂಗಳೂರು-ತಿಪಟೂರು-ರೆಯಿಲಿನ ಕೆಲಸವನ್ನು ಪ್ರಾರಂಭಿಸಿದರು. ೧೮೮೧ರಲ್ಲಿ ಅವರು ಪ್ರಜಾಪ್ರತಿನಿಧಿಸಭೆಗೆ ಈ ರೀತಿ ತಿಳಿಸಿದರು :—

"ಸರಕಾರದ ಸಾಮಾನ್ಯವಾದ ದಿನವಹಿಯ ಆಡಳಿತವೊಂದರಲ್ಲಿ ಮಾತ್ರವೇ ನಮ್ಮ ಗಮನವು ನಿಂತರೆ ಸಾಲದೆಂಬ ಅಂಶವನ್ನು ಒತ್ತಿಹೇಳುತ್ತೇನೆ. ದೇಶದ ಏಳಿಗೆಗೆ ಮುಖ್ಯಾಧಾರಗಳಾದ ಬಗೆ ಬಗೆಯ ಕಸಬುಗಳ ಅಭಿವೃದ್ಧಿಗೂ ನಾವು ಲಕ್ಷ್ಯಕೊಡಬೇಕು. ಈ ವಿಷಯದಲ್ಲಿ ನೀವು ಕೊಡಬಹುದಾದ ಸಲಹೆಗಳಿಗೆ ಶ್ರೀಮನ್ಮಹಾರಾಜರವರ ಸರಕಾರವು ಸಂಪೂರ್ಣವಾದ ಗಮನವನ್ನು ಕೊಡುವುದು. ಈ ವಿಷಯಕ್ಕಾಗಿಯೇ ಪ್ರತ್ಯೇಕವಾಗಿ ಒಬ್ಬ ಅಧಿಕಾರಿಯನ್ನು ನಿಯಮಿಸುವುದರಿಂದ ವಿಶೇಷ ಉಪಯೋಗವಿಲ್ಲ. ಏಕೆಂದರೆ ಒಬ್ಬ ಮನುಷ್ಯನ ಬುದ್ಧಿಯಿಂದಲೂ ಅನುಭವದಿಂದಲೂ ಆಗಬಹುದಾದ ಕೆಲಸವು ಬಹು ಸ್ವಲ್ಪ. ಈ ವಿಷಯದಲ್ಲಿ ಶ್ರದ್ಧೆ ತೆಗೆದುಕೊಳ್ಳುವ ಖಾಸಗೀ ಪ್ರಜೆಗಳನ್ನು ಸೇರಿಸಿ, ಒಂದು ದೊಡ್ಡ ಸಭೆಯನ್ನೇರ್ಪಡಿಸಬೇಕೆಂದು ಶ್ರೀಮನ್ಮಹಾರಾಜರವರು ಕುತೂಹಲಪಟ್ಟಿರುವರು.* ಅಂತಹ ಸಭೆಯು ಏರ್ಪಟ್ಟ ಮೇಲೆ, ದೇಶದ ಕಸಬುಗಳನ್ನು ವೃದ್ಧಿಗೊಳಿಸುವುದಕ್ಕಾಗಿ ಆ ಸಭೆಯು ಮಾಡುವ ಪ್ರಯತ್ನಗಳಿಗೆ ಸಾಹಾಯ್ಯ ಕೊಡುವುದು ಶ್ರೀಮನ್ಮಹಾರಾಜರ ಸರಕಾರದ ಕರ್ತವ್ಯವಾಗಿರುವುದು.

"ದೇಶದ ಸಂಪತ್ತನ್ನು ಅಭಿವೃದ್ಧಿಪಡಿಸುವುದಕ್ಕೆ 'ರೆಯಿಲ್' ಮಾರ್ಗಗಳನ್ನು ಹಾಕುವುದು ಮೊದಲನೆಯ ಪ್ರಯತ್ನವೆಂದು ಸರಕಾರದವರ ಅಭಿಪ್ರಾಯ. ಸಂಸ್ಥಾನದಲ್ಲಿ ಮೊದಲನೆಯದಾದ ಬೆಂಗಳೂರು—ಮೈಸೂರು 'ರೆಯಿಲು' ಸ್ವಲ್ಪ ಕಾಲದಲ್ಲಿಯೇ ಪೂರಯಿಸುವದು. ಆ ಕೆಲಸವು ಹಿಂದಿನ (ಕಮಿಷನ್) ಸರಕಾರದವರಿಂದ ಹಣದ ತೊಂದರೆಯು ವಿಶೇಷವಾಗಿದ್ದ ಕಾಲದಲ್ಲಿ ಪ್ರಾರಂಭಿಸಲ್ಪಟ್ಟು, ಎಲ್ಲಾ ಭಾಗಗಳಲ್ಲಿಯೂ ತೃಪ್ತಿಕರ

---

* ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ದಿನದಲ್ಲಿ ಏರ್ಪಾಟಾಗಿ ಬೆಳೆದ "ಎಕನಾಮಿಕ್ ಕಾನ್‌ಫರೆನ್ಸು" (ಸಂಪದಭಿವರ್ಧಕ ಸಮಾಜವು) ಇದೇ ಬಗೆಯದು.

ವಾಗಿಯೇ ನಡೆದಿದೆ. ಅದಕ್ಕಾಗಿ ಎಲ್ಲಾ ಇಲಾಖೆಗಳಲ್ಲಿಯೂ ಮಿತವ್ಯಯ ಮಾಡ ಬೇಕಾಯಿತಲ್ಲದೆ, ಖಜಾನೆಯಲ್ಲಿ ಉಳಿದಿದ್ದ ಸ್ವಲ್ಪ ಹಣವೂ, ಇದರಷ್ಟು ಉಪಯುಕ್ತ ವಲ್ಲದ ಬಾಬುಗಳಿಗೆ ವೆಚ್ಚವಾಗಿ ಹೋಗದೆ, ಉಪಯೋಗಕರವೂ ಲಾಭಕಾರಿಯೂ ಆದ ಈ ಕೆಲಸಕ್ಕೇ ವಿನಿಯೋಗಿಸಲ್ಪಟ್ಟಿತು. ಮೈಸೂರಿಗೆ ಹಾಕುವ ೮೬ ಮೈಲಿ ದೂರದ ರೆಯಿಲಿಗೆ ೩೫ ಲಕ್ಷ ರೂಪಾಯಿ ಮುಟ್ಟುವುದೆಂದು ಅಂದಾಜು ಹಾಕಿದೆ. ಇದರ ಪೈಕಿ ೧೮೭೯–೮೦–೮೧ನೆಯ ವರುಷಗಳಲ್ಲಿ ೨೫ ಲಕ್ಷ ರೂಪಾಯಿಗಳು ಖರ್ಚಾದವು. ಉಳಿದುದು ಈ ಸಾಲಿನಲ್ಲಿ ಮುಗಿದುಹೋಗುವುದು. ಆ ೩೫ ಲಕ್ಷಗಳ ಪೈಕಿ ೧೫ ಲಕ್ಷಗಳು ಸಾಲೀ ಯಾನಾ ಹುಟ್ಟುವಳಿಯಿಂದ ಕೊಡಲ್ಪಟ್ಟವು. ಮಿಕ್ಕುದನ್ನು ಬರುವ ನಾಲ್ಕು ವರ್ಷಗಳ ಶಿಲ್ಕಿನಿಂದ ತೆರಬೇಕು.

"ಇನ್ನೂ ಕೆಲವು 'ರೆಯಿಲ್' ದಾರಿಗಳು ಸಂಸ್ಥಾನಕ್ಕೆ ಅತಿ ಜರೂರಾಗಿ ಬೇಕಾಗಿವೆ. ಬೆಂಗಳೂರಿಂದ ತುಮಕೂರು–ತಿಪಟೂರುಗಳ ಮಾರ್ಗವಾಗಿ ತರೀಕೆರೆಗೆ ಹೋಗುವ ೧೫೦ ಮೈಲಿಗಳ ಮಧ್ಯಮಾರ್ಗವೊಂದು ಸಂಸ್ಥಾನದ ಮುಖ್ಯ ಭಾಗಕ್ಕೆ ಅತ್ಯಾವಶ್ಯಕವಾಗಿದೆ. ಆ ಮಾರ್ಗವು, ಕಾಫಿ ಅಡಿಕೆಗಳನ್ನು ಬೆಳೆಯುವ ಹಾಸನ, ಕಡೂರು, ಶಿವಮೊಗ್ಗ ಡಿಸ್ಟ್ರಿಕ್ಟುಗಳನ್ನು ಹಾಯ್ದು, ರಾಜ್ಯದ ದೂರ ಪ್ರಾಂತಗಳನ್ನೆಲ್ಲಾ ಬೆಂಗಳೂರಿಗೆ ಸೇರಿಸುವುದು. ಮುಂದೆ ಒಂದುವೇಳೆ ಕ್ಷಾಮಬಂದರೆ ಕ್ಷಾಮನಿವಾರಣೆಗೆ ಆ ಮಾರ್ಗವು ವಿಶೇಷ ಸಹಾಯವಾಗುವುದರಿಂದ, ಅದು ಸಂಸ್ಥಾನಕ್ಕೆ ಅತ್ಯಂತಾವಶ್ಯಕವಾಗಿದೆ. ಈಗ, ಮೇಲೆ ಹೇಳಿದ ದೂರ ಪ್ರದೇಶಗಳಿಂದ ಪದಾರ್ಥಗಳನ್ನು (ಭಂಡಿಗಳಲ್ಲಿ) ಸಾಗಿಸಿಕೊಂಡು ಬರುವುದಕ್ಕೆ ದ್ರವ್ಯವು ವಿಶೇಷ ವೆಚ್ಚವಾಗುವುದಲ್ಲದೆ, ದುರ್ಭಿಕ್ಷಕಾಲದಲ್ಲಿ ಅಲ್ಲಿಂದ ತಕ್ಕಷ್ಟು ಆಹಾರ ಸಾಮಗ್ರಿಗಳನ್ನು ತರುವುದು ಸಾಧ್ಯವಲ್ಲ. (ಈ ಕಾರಣಗಳಿಂದ) ಮೇಲೆ ಹೇಳಿದ ರೆಯಿಲು ಲಾಭಕರವಾಗಿರುವುದು ಮಾತ್ರವೇ ಅಲ್ಲ; ಪದಾರ್ಥಗಳನ್ನು ರಫ್ತು ಮಾಡುವ ಪ್ರದೇಶಗಳವರ ಸಂಪತ್ತನ್ನು ವೃದ್ಧಿಗೊಳಿಸಿ, ಸರಕಾರದ ಆಡಳಿತದ ವೆಚ್ಚವನ್ನು ಕಡಿಮೆಮಾಡಿ, ಬಿಗಿಯನ್ನು ಹೆಚ್ಚಿಸಿ, ಸಂಸ್ಥಾನದಲ್ಲಿ ಕೃಷಿ ಕೈಗಾರಿಕೆಗಳ ಏಳಿಗೆಯನ್ನೂ, ಸರ್ವತೋಮುಖವಾದ ಅಭಿವೃದ್ಧಿಯನ್ನೂ ಉಂಟುಮಾಡುವುದು. ಬಳ್ಳಾರಿ, ಗೋವಾ, ದಕ್ಷಿಣ ಮಹಾರಾಷ್ಟ್ರಗಳಿಂದ ಬಂದು ಹುಬ್ಬಳ್ಳಿಯಲ್ಲಿ ಸೇರುವ ರೆಯಿಲುಗಳಿಗೆ ಈ ದಾರಿಯನ್ನು ಕೂಡಿಸುವುದು ತುಂಬಾ ಅನುಕೂಲ. ತರೀಕೆರೆಯಿಂದ ಶಿವಮೊಗ್ಗಾ ಮಾರ್ಗವಾಗಿ ಸಂಸ್ಥಾನದ ಸರಹದ್ದಿನವರೆಗೆ ೫೦ ಮೈಲಿ ದೂರ ರೆಯಿಲುದಾರಿ ಹಾಕಿ ಹೊಗೆಯುಗಾಡಿಗಳನ್ನಿಡಲು, ಮೈಲಿಯೊಂದಕ್ಕೆ ಅತ್ಯಧಿಕಪಕ್ಷ ೪೦,೦೦೦ ರೂಪಾಯಿಗಳಂತೆ ಲೆಕ್ಕ ಹಾಕಿದರೆ, ೮೦ ಲಕ್ಷಗಳಿಗಿಂತಲೂ ಸ್ವಲ್ಪ ಕಡಿಮೆಯಾಗಿ ಬೇಕಾಗುವುದು.

"ಇನ್ನೂ ಯಾವ 'ರೆಯಿಲ್' ದಾರಿಗಳನ್ನು ಹಾಕುವುದರಿಂದ ಪ್ರಯೋಜನ ವುಂಟೆಂದರೆ:—ಮೈಸೂರಿನಿಂದ ವೈನಾಡಿಗೊಂದು, ಕೊಡಗಿನ ಸರಹದ್ದಿಗೊಂದು. ಇವುಗಳಲ್ಲಿ ಪ್ರತಿಯೊಂದೂ ಸುಮಾರು ೫೦ ಮೈಲಿ. ಇವೆರಡೂ ದೇಶವು ಸಾಮಾನ್ಯವಾಗಿ ಹೀನದಶೆಯಲ್ಲಿರುವ ಭಾಗಗಳಲ್ಲಿ ಹೋಗುವುವು. ಕಾಫಿಯನ್ನು ಬೆಳೆಯುವ ವೈನಾಡು ಮತ್ತು ಕೊಡಗು ಡಿಸ್ಟ್ರಿಕ್ಟುಗಳಿಗೆ ಆಹಾರ ಸಾಮಗ್ರಿಗಳೂ ಕೂಲಿಯಾಳುಗಳೂ ಮೈಸೂರಿನಿಂದಲೇ ಹೋಗಬೇಕಾಗಿವೆಯಾದಕಾರಣ, ಈ ಮಾರ್ಗಗಳು ಆ ವಿಷಯದಲ್ಲಿ ತುಂಬಾ ಉಪಯೋಗವಾಗುವುವಲ್ಲದೆ, ಈಗ ತಯಾರಾಗಿರುವ ಮೈಸೂರು-ಬೆಂಗಳೂರು-ಮದರಾಸು ರೆಯಿಲಿಗೆ ಕಾಫಿಯ ಡಿಸ್ಟ್ರಿಕ್ಟುಗಳ ಮತ್ತು ಚಿನ್ನದ ಗಣಿಯ ಡಿಸ್ಟ್ರಿಕ್ಟುಗಳ ಆಮದುರಫ್ತುಗಳನ್ನು ತಂದು ಸೇರಿಸುವುವು. ಈ ಎರಡು ದಾರಿಗಳಲ್ಲಿ ಯಾವುದಾದರೊಂದನ್ನು ವೈನಾಡು ಮೂಲಕ ಬೈಪೂರಿಗಾಗಲಿ, ದಕ್ಷಿಣ ಕೊಡಗು ಮೂಲಕ ತಲಚೆರಿಗಾಗಲಿ ಮುಂದುಸಾಗಿಸಿ ಪಶ್ಚಿಮ ಸಮುದ್ರತೀರಕ್ಕೆ ಸೇರಿಸಿದರೆ, ಮೈಸೂರು ದೇಶಕ್ಕೂ ತೀರಪ್ರದೇಶ-ಬೊಂಬಾಯಿಗಳಿಗೂ ನಡೆಯುವ ವ್ಯಾಪಾರಕ್ಕೆ ತುಂಬಾ ಅನುಕೂಲವುಂಟು. ಹಿಂದಿನ ಕ್ಷಾಮಕಾಲದಲ್ಲಿ ಕಲ್ಕತ್ತೆಯಿಂದ ಬೈಪೂರ್, ಕಲ್ಲಿಕೋಟೆ, ತಲಚೆರಿಗಳ ದ್ವಾರಾ ಹಡಗುಗಳಲ್ಲಿ ಅಗ್ಗವಾಗಿ ಬರುತ್ತಿದ್ದ ಅಕ್ಕಿಯನ್ನು ಇಲ್ಲಿಗೆ ತರುವುದಕ್ಕೆ ಇಂತಹ 'ರೆಯಿಲ್' ಮಾರ್ಗವಿಲ್ಲದಿದ್ದುದರ ಕಷ್ಟವು ಚೆನ್ನಾಗಿ ಅನುಭವಕ್ಕೆ ಬಂದಿತು.

"ಸುಮಾರು ೩೦೦ ಮೈಲಿ ಫಾಸಲೆಯುಳ್ಳ ಈ ಮೇಲೆ ಸೂಚಿಸಿರುವ ಮೂರು 'ರೆಯಿಲ್' ಮಾರ್ಗಗಳಿಗೂ ೧೨೦ ಲಕ್ಷ ರೂಪಾಯಿ ಬೇಕಾಗಬಹುದು. ಬಹು ದ್ರವ್ಯಸಾಧ್ಯವಾದ ಇಂತಹ ಕಾರ್ಯವನ್ನು ರಾಜ್ಯದ ಹುಟ್ಟುವಳಿಯ ಹಣದಿಂದಲೇ ನಡೆಸಲಾಗುವುದಿಲ್ಲ. ಇಂಡಿಯಾ ದೇಶದಲ್ಲಿ ಇಂತಹ ವ್ಯಾಪಾರಗಳಿಗೆ ಪ್ರವೇಶಿಸಲು ಇಂಗ್ಲಿಷ್ ಜನರಿಗೆ ಈಗೀಗ ಇಷ್ಟ ಹುಟ್ಟುತ್ತಲಿದೆ. 'ರೆಯಿಲ್' ಹಾಕುವ ಕೆಲಸದ ಪ್ರಾರಂಭ ಕಾಲದಲ್ಲಿ ಒಂದೆರಡು ವರ್ಷ ಬಂಡವಾಳದಮೇಲೆ ಶೇಕಡಾ ೪ರಂತೆ ಬಡ್ಡಿಕೊಡಲು ನಾವು ಒಪ್ಪಿಕೊಂಡು, 'ರೆಯಿಲ್' ದಾರಿಗಳನ್ನು ಹಾಕಲು ಇಂಗ್ಲಿಷ್ 'ಕಂಪೆನಿ'ಗಳೊಡನೆ ಒಪ್ಪಂದ ಮಾಡಬಹುದು. 'ರೆಯಿಲ್ ವೆ'ಯು ಬೇಗನೆ ತನ್ನ ಬಂಡವಾಳದ ಮೇಲಿನ ಬಡ್ಡಿಯನ್ನು ತಾನೇ ಕೊಡಲಾರಂಭಿಸಿ, ತನಗಾಗುವ ವೆಚ್ಚವನ್ನು ತಾನೇ ಸಂಪಾದಿಸಿಕೊಳ್ಳುವುದೆಂದೂ, ಈ ರೀತಿ ದೇಶಾಭ್ಯುದಯಕ್ಕೆ ಅತ್ಯಾವಶ್ಯಕವಾದ ಈ ದೊಡ್ಡ ಕೆಲಸಗಳು ಸಂಸ್ಥಾನಕ್ಕೆ ಯಾವ ಖರ್ಚೂ ಇಲ್ಲದೆಯೇ (ಕಂಪೆನಿಗಳ ಮೂಲಕ) ನಡೆಯುವುವೆಂದೂ ನಂಬಿಕೆಯಿಂದ ನಿರೀಕ್ಷಿಸಲ್ಪಟ್ಟಿದೆ."

# ಪರಿಚ್ಛೇದ ೬

## ಮಂತ್ರಾಲೋಚಕ ಸಭೆ—ಪ್ರಜಾಪ್ರತಿನಿಧಿ ಸಭೆ

"ರಾಜಾ ಪ್ರಕೃತಿ ರಂಜನಾತ್"

"ಜನವಾಕ್ಯಂ ತು ಕರ್ತವ್ಯಂ"

ರಂಗಾಚಾರ್ಯರು ಮಂತ್ರಿ ಪದವಿಯನ್ನಲಂಕರಿಸಿದ ಕೂಡಲೆ ಈ ದೇಶದಲ್ಲಿ ಪ್ರಜಾವಿಹಿತ ಪ್ರಭುತ್ವಕ್ಕೆ ಅಂಕುರಾರ್ಪಣವಾಯಿತು.

ಮೈಸೂರು ಸಂಸ್ಥಾನವನ್ನು ಬ್ರಿಟಿಷ್ ಸರಕಾರವು ದೇಶೀಯ ಪ್ರಭುತ್ವಕ್ಕೆ ಬಿಟ್ಟುಕೊಡುವಾಗ, ಆ ಪ್ರಭುತ್ವವನ್ನು ಯಾವ ನಿಯಮಗಳಿಗೆ ಒಳಪಡಿಸಬೇಕೆಂಬ ವಿಷಯದಲ್ಲಿ ೧೮೭೮-೭೯ರಲ್ಲಿ ಜಿಜ್ಞಾಸ ನಡೆದಿತ್ತು. ಇಂಡಿಯಾ ಸರಕಾರದವರು ಮೈಸೂರು ಚೀಫ್ ಕಮಿಷನರವರಿಗೆ ಬರೆದ ೧೮೭೮ನೆಯ ನೊವೆಂಬರ್ ೯ನೆಯ ತಾ॥ ನ ೨೫೪೨ನೆಯ ನಂಬರುಳ್ಳ ನಿರೂಪದಲ್ಲಿ ಕೆಲವು ಸಲಹೆಗಳನ್ನು ಸೂಚಿಸಿದ್ದರು. ಅವುಗಳಲ್ಲಿ ಮುಖ್ಯವಾದುವು ಯಾವುವೆಂದರೆ :—

"(೧) ಬ್ರಿಟಿಷ್ ಆಳಿಕೆಯಲ್ಲಿ ಜಾರಿಯಲ್ಲಿದ್ದ ಕಾನೂನು ಕಟ್ಟುಪಾಡುಗಳು ದೇಶೀಯ ಪ್ರಭುತ್ವದಲ್ಲಿಯೂ ಜಾರಿಯಲ್ಲಿರಬೇಕು. ಅವುಗಳ ಬದಲಾವಣೆಯು ಆವಶ್ಯಕವೆಂದು ತೋರಿದಾಗ, ಅದು ಕ್ರಮವಾದ ರಾಜ್ಯಶಾಸನಾಂಗದ (ಲೆಜಿಸ್ಲೇಚರ್) ಮೂಲಕವೇ ನಡೆಯಬೇಕು.

"(೨) ಸರಕಾರವು ವಸೂಲು ಮಾಡಬೇಕೆನ್ನುವ ಪ್ರತಿಯೊಂದು ತೆರಿಗೆಯೂ ಅಥವಾ ಕಂದಾಯವೂ ಯಾವುದಾದರೊಂದು ಶಾಸನವನ್ನು (ಕಾನೂನನ್ನು), ಅಥವಾ ಮಾಮೂಲಾದ ಹಕ್ಕನ್ನು, ಅಥವಾ ಸಂಪ್ರದಾಯವನ್ನು ಅನುಸರಿಸಿರಬೇಕು.

"(೩) ಮಹಾರಾಜರ ಸ್ವಂತ ಆದಾಯವ್ಯಯಗಳೂ ರಾಜ್ಯದ ಸಾರ್ವಜನಿಕ ಆದಾಯವ್ಯಯಗಳೂ ಬೇರೆ ಬೇರೆಯಾಗಿರಬೇಕು. ರಾಜ್ಯದ ಖರ್ಚುವೆಚ್ಚಗಳನ್ನು ನಡೆಯಿಸುವುದಕ್ಕೆ ಕ್ರಮವಾದ ಸಿಬ್ಬಂದಿ ಇರಬೇಕು ಮತ್ತು ಅವುಗಳ ಲೆಕ್ಕಪತ್ರಗಳು ಕ್ರಮವಾಗಿ ಪರೀಕ್ಷೆ ಹೊಂದಬೇಕು.

"(೪) ಮಹಾರಾಜರಿಗೆ ಸಹಾಯವಾಗಿರಲು ಒಂದು ಮಂತ್ರಾಲೋಚನಾಸಭೆಯಿರಬೇಕು. ಶಾಸನರಚನೆ, ಆದಾಯವ್ಯಯದ ಏರ್ಪಾಟು, ರಾಜ್ಯ ಸೇವಕರನ್ನು ನಿಯಮಿ

ಸುವುದು ಮತ್ತು ಶಿಕ್ಷಿಸುವುದು—ಇವೇ ಮೊದಲಾದ ಮುಖ್ಯ ಕಾರ್ಯಗಳು ಮೊದಲು ಆ ಮಂತ್ರಿಮಂಡಲದಲ್ಲಿ ಚರ್ಚೆಯಾಗಬೇಕು.''

ಚೀಫ್ ಕಮಿಷನರ್ ಗಾರ್ಡನ್ ಸಾಹೇಬರವರು ೧೮೭೯ನೆಯ ಫೆಬ್ರುವರಿ ೧೦ರಲ್ಲಿ ಇಂಡಿಯಾ ಸರಕಾರಕ್ಕೆ ಬರೆದ ಪ್ರತ್ಯುತ್ತರದಲ್ಲಿ ಈ ಮೇಲಿನ ಸೂಚನೆಗಳನ್ನಂಗೀಕರಿಸಿ, ಈ ಕೆಳಗಿನ ನಿಬಂಧನೆಗಳನ್ನು ಸೂತ್ರೀಕರಿಸಿದರು :—

''ರಾಜ್ಯ ಪರಿಪಾಲನೆಯು, ಇದುವರೆಗೂ ಇದ್ದಂತೆಯೇ ಇನ್ನು ಮುಂದೆಯೂ ಯೋಗ್ಯವಾಗಿಯೂ, ಬ್ರಿಟಿಷ್ ಪ್ರಭುತ್ವದಲ್ಲಿ ಜನರಿಗುಂಟಾಗಿರುವ ಪ್ರಜಾಧರ್ಮದ (ಅಥವಾ ಪ್ರಜಾ ಸ್ವಾತಂತ್ರ್ಯದ) ಭಾವನೆಗಳಿಗೆ ಅನುಸಾರವಾಗಿಯೂ ನಡೆಯುವುದೆಂಬ ವಿಷಯದಲ್ಲಿ ದೇಶೀಯ ರಾಜರಿಂದ ತಕ್ಕ ಪ್ರಮಾಣಗಳನ್ನು ತೆಗೆದುಕೊಳ್ಳಬೇಕು. ಈ ಅರ್ಥಕ್ಕಾಗಿ—

(೧) ರಾಜಕುಟುಂಬಕ್ಕಾಗಿ ರಾಜ್ಯಾದಾಯದಿಂದ ಕೊಡಬೇಕಾದ ಅಂಶವನ್ನು ನಿಷ್ಕರ್ಷೆ ಮಾಡಬೇಕು.

(೨) ಉಳಿದ ಹಣವನ್ನು ಪ್ರಜಾಕಾರ್ಯಗಳಿಗೇ ವಿನಿಯೋಗಿಸಬೇಕು. ಇದಕ್ಕೆ ವರ್ಷೇವರ್ಷೇ ಆದಾಯವ್ಯಯ ಕ್ರಮವು (ಬಡ್ಜಟ್) ಗೊತ್ತಾಗಿ, ಅದಕ್ಕೆ ತಕ್ಕ ಲೆಕ್ಕಪತ್ರಗಳಿರಬೇಕು.

(೩) ಈಗ ಜಾರಿಯಲ್ಲಿರುವ ಕಾಯಿದೆಗಳೂ, ಹಕ್ಕುಗಳೂ, ಮಾಮೂಲುಗಳೂ ಹಾಗೆಯೇ ಇರಬೇಕು. ಅವುಗಳ ಬದಲಾವಣೆಯು ಕ್ರಮವಾದ ಶಾಸನಸಭೆಯಿಂದಲೇ ಆಗಬೇಕು.

(೪) ಸಿವಿಲ್ ಮತ್ತು ಕ್ರಿಮಿನಲ್ ನ್ಯಾಯಸ್ಥಾನ (ಕೋರ್ಟು)ಗಳು ಸ್ವತಂತ್ರವಾಗಿಯೂ, ಕಾರ್ಯ ವಿಚಕ್ಷಣೆಯುಳ್ಳುವಾಗಿಯೂ ಇರಬೇಕು. ಅವುಗಳ ವಿಮರ್ಶೆ ತೀರ್ಮಾನಗಳೊಳಕ್ಕೆ ಸರಕಾರವು ಕೈಹಾಕಬಾರದು.

(೫) ಕಂದಾಯ ಸುಂಕ ತೆರಿಗೆಗಳನ್ನು ಶಾಸನ ಸಮ್ಮತವಾಗಿ ಅಥವಾ ಸಂಪ್ರದಾಯಾನುಸಾರವಾಗಿ ಹೊರತು ವಿಧಿಸಬಾರದು.

(೬) ರಾಜ್ಯಯಂತ್ರವು ಸರಿಯಾಗಿ ನಡೆಯುವುದಕ್ಕೆ ಬೇಕಾದ ಅಧಿಕಾರಿ ಮಂಡಲವೂ, ಅದಕ್ಕೆ ತಕ್ಕ ವಿಧಿ ನಿಯಮಗಳೂ, ಅಧಿಕಾರಿಗಳನ್ನು ಗೊತ್ತುಮಾಡುವುದಕ್ಕೆ ತಕ್ಕ ಕಟ್ಟುಪಾಡುಗಳೂ ಇರಬೇಕು.

(೭) ಸ್ವೇಚ್ಛಾ ವೃತ್ತಿಗೆ ಅವಕಾಶವಿಲ್ಲದಂತಾಗಿ, ಪ್ರಭುತ್ವವು ಬಹು ಜನ ಸಮ್ಮತವಾಗುವಂತೆ ಮಾಡುವುದಕ್ಕೆ ಒಂದು ಮಂತ್ರಾಲೋಚನಾ ಸಭೆಯಿರಬೇಕು. ಈ ಸಭೆಯೇ ರಾಜ್ಯದ ಪ್ರಧಾನಾಂಗವಾಗಿ, ಜವಾಬ್ದಾರಿ ವಹಿಸತಕ್ಕುದಾಗಿರುವುದು.

(೮) ಈ ಮಂತ್ರಿಮಂಡಲಕ್ಕೆ ಉಪಾಂಗವಾಗಿ ಒಂದು ಪ್ರಜಾಪ್ರತಿನಿಧಿ ಸಭೆಯಿರಬೇಕು. ಅದರಲ್ಲಿ ಅನುಭವಸ್ಥರಾದ ವಿಶ್ರಾಂತಿದಾರರೂ, ದೊಡ್ಡ ಮನೆತನದವರೂ, ಪ್ರಮುಖ ಜನರೂ ಇದ್ದುಕೊಂಡು, ಸಮಸ್ತ ರಾಜ್ಯಕಾರ್ಯಗಳ ವಿಷಯಗಳಲ್ಲಿಯೂ ತಮ್ಮ ಅಭಿಪ್ರಾಯಗಳನ್ನು ತಿಳುಹಿಸಬೇಕು.

ಈ ಸೂತ್ರಗಳನ್ನು—೮ನೆಯದರ ವಿನಾ—ಇಂಡಿಯಾ ಸರಕಾರದವರೂ, ಸಾರ್ವಭೌಮ ಸರಕಾರದವರೂ ಅಂಗೀಕರಿಸಿದರು. ೮ನೆಯ (ಪ್ರತಿನಿಧಿಸಭಾ ವಿಷಯಕವಾದ) ಸಲಹೆಯು ಅಪೂರ್ವವಾದುದೆಂದೂ, ಅಂತಹುದು ಇನ್ನೂ ಬ್ರಿಟಿಷ್ ಇಂಡಿಯದಲ್ಲಿಯೇ ಆಗಿರಲಿಲ್ಲವೆಂದೂ ಹೇಳಿ, ಅದನ್ನು ದೇಶೀಯ ಪ್ರಭುತ್ವದ ತೀರ್ಮಾನಕ್ಕೇ ಬಿಟ್ಟುಬಿಡಬಹುದೆಂದು ಇಂಡಿಯಾ ಸರಕಾರದವರು ಅಭಿಪ್ರಾಯಪಟ್ಟರು. ಸರ್ ಜೇಮ್ಸ್ ಗಾರ್ಡನ್ ಸಾಹೇಬರವರು ಈ ಮೇಲಿನ ಸೂಚನೆಗಳನ್ನು ಮಾಡಿದಾಗ, ರಂಗಾಚಾರ್ಯರು ಅವರಿಗೆ ಸೆಕ್ರೆಟರಿಯಾಗಿಯೂ ಆಪ್ತ ಮಂತ್ರಿಯಾಗಿಯೂ ಇದ್ದರೆಂಬುದು ವಾಚಕರ ಜ್ಞಾಪಕದಲ್ಲಿದೆಯಷ್ಟೆ? ಆ ಸೂಚನೆಗಳಲ್ಲಿ ರಂಗಾಚಾರ್ಯರ ಕೈವಾಟದ ಗುರುತುಗಳು ಚೆನ್ನಾಗಿ ಕಾಣಬರುತ್ತವೆ. ರಾಜ್ಯವನ್ನೊಪ್ಪಿಸಿಕೊಡುವಾಗ ಬ್ರಿಟಿಷರು ಶ್ರೀಮನ್ಮಹಾರಾಜರವರಿಗೆ ಕೊಟ್ಟ ಸನ್ನದಿನ* ಅಥವಾ ಕರಾರಿನ ನಕಲನ್ನೂ ರಂಗಾಚಾರ್ಯರು ಪೂರ್ವಭಾವಿಯಾಗಿ ನೋಡಿ ಪರಿಷ್ಕರಿಸಿದ್ದರೆಂದು ಗೊತ್ತಾಗುತ್ತದೆ.

ಸ್ವೇಚ್ಛಾ ಪ್ರಭುತ್ವ ಅಥವಾ ನಿರಂಕುಶ ಪ್ರಭುತ್ವದ ಅವಗುಣಗಳನ್ನು ರಂಗಾಚಾರ್ಯರು ಚೆನ್ನಾಗಿ ತಿಳಿದಿದ್ದರು. ಆ ಅವಗುಣಗಳಿಗಾಗಿಯೇ 'ನವಾಬ ದೌಲತ್ತು' ಈಗಲೂ ಜನರ ಹಾಸ್ಯ ದ್ವೇಷಗಳಿಗೆ ಗುರಿಯಾಗಿದೆ. ರಾಜರು ತಮಗೆ ಮನಸ್ಸುಬಂದಂತೆ ವಿಧಿಸುವುದು, ಅಧಿ

* ಈ ಸನ್ನದು ೧೯೧೩ರಲ್ಲಿ ಸ್ವಲ್ಪ ವ್ಯತ್ಯಾಸ ಹೊಂದಿ, ಬೇರೊಂದು ಹೊಸ ಕರಾರಾಯಿತು. ಅದೇ ಈಗ ಜಾರಿಯಲ್ಲಿರುವುದು.

ಕಾರಿಗಳು ತಮ್ಮಿಷ್ಟದಂತೆ ಆಡಳಿತ ನಡೆಸುವುದು, ರಾಜ್ಯಕಾರ್ಯ ನಿರ್ವಾಹದಲ್ಲಿ ನಿಬಂಧನೆ ವಿಚಾರಣೆಗಳಿಲ್ಲದಿರುವುದು, ಪ್ರಜೆಗಳು ತಮ್ಮ ಕಷ್ಟಸುಖಗಳನ್ನು ವಿಚಾರಿಸುವವರಿಲ್ಲದೆ ಕೊರಗುತ್ತಿರುವುದು—ಇವು ನಿರಂಕುಶ ಪ್ರಭುತ್ವದ ಮುಖ್ಯ ಲಕ್ಷಣಗಳು. ಎಲ್ಲಿ ರಾಜ್ಯ ಸೇವಕರ ಎದುರಿಗೆ ನಿಂತು ಹೇಳಬಲ್ಲವರೂ ಕೇಳಬಲ್ಲವರೂ ಇಲ್ಲದೆ, ಅವರು 'ಆಡಿದುದೇ ಆಟ, ಮಾಡಿದುದೇ ಮಾಟ'ವಾಗಿರುವುದೋ, ಅಲ್ಲಿ ಪ್ರಜೆಗಳ ಸುಖ ಸಂಪತ್ತುಗಳಿಗೆ ಮಾತ್ರವಲ್ಲದೆ ಮತನೀತಿಗಳಿಗೂ ಊನಬರುವುದು ಸ್ವಾಭಾವಿಕವಾಗಿಯೇ ಇರುವುದು. ಪುರಾತನ ಭರತವರ್ಷದಲ್ಲಿಯೂ, ಈಚೆಗೆ ವಿಜಯನಗರದ ಹುಕ್ಕಬುಕ್ಕರ ಮತ್ತು ಮಹಾರಾಷ್ಟ್ರದ ಛತ್ರಪತಿ ಶಿವಾಜಿ ಮುಂತಾದವರ ಕಾಲದಲ್ಲಿಯೂ, ರಾಜ್ಯಭಾರವು ಅರಸನೊಬ್ಬನಿಂದ ಮಾತ್ರವೇ ನಡೆಯದೆ, "ಅಷ್ಟಪ್ರಧಾನ" ಮುಂತಾದ ಮಂತ್ರಿಮಂಡಲದಿಂದ ನಿರ್ವಹಿಸಲ್ಪಡುತ್ತಿತ್ತು. ಪ್ರಜಾಭಿಮತಾನುವರ್ತಕಪ್ರಭುತ್ವವು ಈ ದೇಶದಲ್ಲಿ ಆರ್ಷೇಯವಾಗಿ ಸಿದ್ಧವಾದುದು. ಶ್ರೀರಾಮ ಯುಧಿಷ್ಠಿರಾದಿಗಳು ಪ್ರಜೆಗಳ ಅಭಿಪ್ರಾಯವನ್ನೇ ಅನುಸರಿಸುತ್ತಿದ್ದರೆಂದು ಪುರಾಣಗಳು ತಿಳಿಸುತ್ತವೆ. ಪೂರ್ವಕಾಲದ ಹಿಂದೂ ರಾಜರು ಯಾವ ಕಟ್ಟಳೆ ಕಾನೂನನ್ನು ವಿಧಿಸಿದರೂ ಅದು ಋಷಿಗಳ, ಶಾಸ್ತ್ರಜ್ಞರ ಮತ್ತು ಧರ್ಮಜ್ಞರ ಸಮ್ಮತಿಗೆ ಒಳಪಟ್ಟಿತ್ತು. ನ್ಯಾಯ ವಿಮರ್ಶೆಯಲ್ಲಿ ಪ್ರಜೆಗಳ ಅಭಿಪ್ರಾಯವೇ ಗೌರವಿಸಲ್ಪಡುತ್ತಿತ್ತು. ಅದಕ್ಕೆ ಈಗಲೂ ಉಳಿದಿರುವ ಪಂಚಾಯತಿ ಪದ್ಧತಿಯೇ ಸಾಕ್ಷಿಯಾಗಿದೆ. ಈ ವಿವರಗಳೆಲ್ಲವೂ ರಂಗಾಚಾರ್ಯರಿಗೆ ಸಂಪೂರ್ಣವಾಗಿ ತಿಳಿದಿದ್ದುವು. ಅವರು ದಿವಾನ್ ಪದವಿಗೆ ನಿಯಮಿಸಲ್ಪಟ್ಟ ದಿನವೇ, ಅವರ ಸಲಹೆಯಂತೆ, ರಾಜ್ಯಾಭಿವೃದ್ಧಿಗೆ ಬೇಕಾದ ಹೊಸ ಏರ್ಪಾಟುಗಳನ್ನು ಮಾಡುವುದರಲ್ಲಿ ನಿರಂತರವೂ ಆಸಕ್ತರಾಗಿದ್ದ (ಆಗಿನ) ಶ್ರೀಮನ್ಮಹಾರಾಜರವರು ಮಂತ್ರಾಲೋಚನಾಸಭೆಯೊಂದನ್ನು (ಮೇಲೆ ಕಂಡ ೭ನೆಯ ನಿಯಮದಂತೆ) ಏರ್ಪಡಿಸಿದರು. ಅದರ ಮೊದಲನೆಯ ಸಭಿಕರು ಯಾರು ಯಾರೆಂದರೆ :—

(೧) **ಶೆಟ್ಟಿಪುಣ್ಯಂ ವೀರವಲ್ಲಿ ರಂಗಾಚಾರ್ಲು, ಸಿ.ಐ.ಇ., ದಿವಾನರು, (ಅಧಿಕಾರದಲ್ಲಿರುವವರೆಗೂ) ಅಧ್ಯಕ್ಷರು.**

(೨) **ಟಿ. ಆರ್. ಆರೋಗ್ಯಸ್ವಾಮಿ ತಂಬುಶೆಟ್ಟಿ, ಜಡ್ಜಿ, ಸಭಿಕರು.**
(೩) **ಪೂರ್ಣ ಕೃಷ್ಣರಾವ್,** ,,
(೪) **ಎ. ರತ್ನಸಭಾಪತಿ ಮೊದಲಿಯಾರ್,** ,,

ಈ ಸಭೆಯ ಕರ್ತವ್ಯವು ಈ ಕೆಳಗಿನ ರೀತಿಯಲ್ಲಿ ಮಹಾರಾಜರವರಿಂದ ವಿಧಾಯಕವಾಯಿತು :—

**"ಕಾನೂನು ಮಾಡುವುದಕ್ಕೂ ಕಂದಾಯ ಹಾಕುವುದಕ್ಕೂ ಸಂಬಂಧಪಟ್ಟ ವಿಷಯಗಳಲ್ಲಿಯೂ, ಮತ್ತು ನಮ್ಮ ಸಂಸ್ಥಾನದ ಒಳ್ಳೆಯ ಆಳಿಕೆಗೂ ನಮ್ಮ ಪ್ರಜೆಗಳ ಯೋಗಕ್ಷೇಮಕ್ಕೂ ಆವಶ್ಯಕವಾದ ಏರ್ಪಾಟುಗಳ ವಿಚಾರದಲ್ಲಿಯೂ, ತಮ್ಮ ತಮ್ಮ ಅಭಿಪ್ರಾಯಗಳನ್ನು ಈ ಸಭೆಯವರು ನಮ್ಮ ಪರ್ಯಾಲೋಚನೆಗಾಗಿ ಬಿನ್ನಯಿಸತಕ್ಕದು."**

ಈ ಸಭಿಕರ ಪೈಕಿ ತಂಬುಶೆಟ್ಟರವರ ಹೆಸರು ಮೈಸೂರಿನ ಚರಿತ್ರೆಯಲ್ಲಿ ಪ್ರಸಿದ್ಧವಾದುದಾಗಿದೆ. ಅವರು ಸತ್ಯಸಂಧರು, ನ್ಯಾಯಪರರು, ಸಾತ್ತ್ವಿಕರು. ಅವರು ಆಮೇಲೆ ಕೆಲವು ಕಾಲ ದಿವಾನ್ ಪದವಿಯನ್ನೂ ಅಲಂಕರಿಸಿದರು. ಪೂರ್ಣ ಕೃಷ್ಣರಾಯರು ಕಮಿಷನರುಗಳ ಕಾಲದಲ್ಲಿ ಡೆಪ್ಯುಟಿ ಕಮಿಷನರಾಗಿಯೂ, ಸಭಾಪತಿ ಮೊದಲಿಯಾರ್ರವರು ಶಿರಸ್ತೆದಾರರಾಗಿಯೂ ಇದ್ದು, ಈ ವೇಳೆಗೆ ಇಬ್ಬರೂ ಕೆಲಸದಿಂದ ನಿವೃತ್ತರಾಗಿದ್ದರು. ಹೀಗೆ ಅಧಿಕಾರಿಮಂಡಲದಿಂದ ಹೊರಗಿದ್ದವರನ್ನೂ ರಂಗಾಚಾರ್ಯರು ಮಂತ್ರಾಲೋಚಕ ಸಭೆಗೆ ಚುನಾಯಿಸಿಕೊಂಡುದು ನಾವು ಗಮನದಲ್ಲಿಡಬೇಕಾದ ಸಂಗತಿ. ಅದು ರಂಗಾಚಾರ್ಯರ ಪ್ರಜಾಪಕ್ಷಪಾತಕ್ಕೆ—ಎಂದರೆ ಅಧಿಕಾರಿ ವರ್ಗಕ್ಕೆ ಸೇರದೆ ಇರುವವರನ್ನೂ ಸರಕಾರದ ಒಳಮೈಯಲ್ಲಿ ಸೇರಿಸಬೇಕೆಂಬ ಇಷ್ಟಕ್ಕೆ—ದೃಷ್ಟಾಂತವಾಗಿದೆ.

ಯಾವ ವಿಷಯದಲ್ಲಿಯೇ ಆಗಲಿ, ಒಬ್ಬನ ಬುದ್ಧಿಗಿಂತಲೂ, ನಾಲ್ವರ ಬುದ್ಧಿಯು ಒಟ್ಟಿಗೆ ಸೇರುವುದರಲ್ಲಿ ಹೆಚ್ಚು ಗುಣವುಂಟು. ತತ್ರಾಪಿ, ರಾಜ್ಯದಲ್ಲಿಯ ಲಕ್ಷೋಪಲಕ್ಷ ಮಂದಿಯ ಸುಖದುಃಖಗಳಿಗೆ ಕಾರಣವಾದ ಕಾನೂನುಗಳು ಒಬ್ಬ ಮನುಷ್ಯನ ಬುದ್ಧಿ ಅಥವಾ ಇಷ್ಟವನ್ನು ಮಾತ್ರವೇ ಅನುಸರಿಸುವುದು ಸರಿಯಲ್ಲ. ಸರಕಾರದ, ಅಧಿಕಾರಿ ವರ್ಗದ, ಪ್ರಭುಗಳ ಮತ್ತು ಪ್ರಜೆಗಳ ಯೋಗಕ್ಷೇಮಗಳೆಲ್ಲ

ವನ್ನೂ ಲಕ್ಷ್ಯದಲ್ಲಿಟ್ಟುಕೊಂಡು ಕಾರ್ಯವಿಧಾನಗಳನ್ನು ನಿಶ್ಚಯಿಸಲು, ನಾನಾ ಪಕ್ಷಗಳನ್ನು ಹಿಡಿದು ಚರ್ಚಿಸಬಲ್ಲ ಅನೇಕ ಮಂದಿ ಆವಶ್ಯಕ. ಹೀಗಿರುವುದರಿಂದ, ಮೈಸೂರಿನಲ್ಲಿ ಮಂತ್ರಾಲೋಚನ ಸಭೆಯು ಸ್ಥಾಪನೆ ಯಾದುದು ರಾಜ್ಯದ ಅಭ್ಯುದಯಕ್ಕೆಲ್ಲ ಮೂಲಾಧಾರವಾಯಿತು. ಅಂತಹ ಸಭೆಯು ಅದುವರೆಗೂ ಇಂಡಿಯಾದೇಶದಲ್ಲಿ ಇನ್ನಾವ ರಾಜ್ಯದಲ್ಲಿಯೂ ಇರಲಿಲ್ಲ. ಈಗಲೂ ಅಂತಹ ಮಂತ್ರಿಮಂಡಲವು ಇಂಡಿಯದ ಅನೇಕ ದೇಶೀಯ ಸಂಸ್ಥಾನಗಳಲ್ಲಿ ಇನ್ನೂ ಹುಟ್ಟಬೇಕಾಗಿದೆ.

ರಂಗಾಚಾರ್ಯರು ಮಾಡಿದ ಕೆಲಸಗಳಲ್ಲಿ ಇದಕ್ಕಿಂತ ಪ್ರಶಂ ಸಾರ್ಹವಾದುದು "ಪ್ರಜಾಪ್ರತಿನಿಧಿ ಸಭೆ." ಈ ಗ್ರಂಥದ ಆದಿ ಭಾಗದಲ್ಲಿ ಹೇಳಿರುವಂತೆ ತಮ್ಮ ಯಶಸ್ಸನ್ನು ಬಹುಕಾಲ ನಿಲ್ಲಿಸುವಂಥ—ಅಷ್ಟುಮಾತ್ರವೇ ಅಲ್ಲ—ಅದನ್ನು ಇತೋಪ್ಯತಿಶಯವಾಗಿ ವೃದ್ಧಿ ಗೊಳಿಸುವಂಥ ಮಹೋಪಕಾರವಾವುದನ್ನು ರಂಗಾಚಾರ್ಯರು ಮೈಸೂರಿಗೆ ಮಾಡಿದರೆಂದರೆ, ಪ್ರಜಾಪ್ರತಿನಿಧಿ ಸಭೆಯೇ ಆ ಪ್ರಶ್ನೆಗೆ ಉತ್ತರವಾಗಿರುವುದು. ಅದೊಂದು ಕಲ್ಪತರುವಿನ ಸಸಿ. ಬಯಸು ವವರ ಯೋಗ್ಯತೆಗೆ ತಕ್ಕಂತೆ ಅದು ಫಲದಾಯಕವಾಗಬಲ್ಲುದು. ವರ್ಷಗಳು ಹೆಚ್ಚಿದಹಾಗೆಲ್ಲಾ ಮರವು ಹೇಗೆ ಹೆಚ್ಚು ಹೆಚ್ಚಾಗಿ ಫಲಭರಿತವಾಗುವುದೋ, ಹಾಗೆ ಪ್ರಜಾಪ್ರತಿನಿಧಿ ಸಭೆಯಿಂದಾಗುವ ಪ್ರಯೋಜನಗಳು ಅದು ವೃದ್ಧಿಯಾದ ಹಾಗೆಲ್ಲಾ ಹೆಚ್ಚುವುವು. ಅದರ ಅಭಿವೃದ್ಧಿಗೆ ಬೇಕಾದವು ಪ್ರಜೆಗಳ ಶ್ರದ್ಧೆ ವಿಶ್ವಾಸಗಳು, ಜಾಣ್ಮೆ ನೀತಿಗಳು, ವಿವೇಕ ದೇಶಭಕ್ತಿಗಳು. ಆದರೆ, ರಂಗಾಚಾರ್ಯರು ತಾವು ನೆಟ್ಟ ಮೊಳಕೆಗೆ ಪಾತಿಮಾಡಿ, ಗೊಬ್ಬರ ಹಾಕಿ, ಬೇಲಿ ಕಟ್ಟಿ, ನೀರೆರೆದು ಸಲಹಲು ತಕ್ಕಷ್ಟುಕಾಲ ಜೀವಿಸಲಿಲ್ಲ. ಅವರೇ ಇನ್ನೂ ಕೆಲವುಕಾಲ ಬದುಕಿದ್ದಿದ್ದರೆ ಪ್ರಜಾಪ್ರತಿನಿಧಿ ಸಭೆಯನ್ನು ಯಾವ ರೀತಿ ಬಲಪಡಿಸುತ್ತಿದ್ದರೋ, ಅವರ ಅನಂತರ ದಿವಾನರಾದವರೂ ಹಾಗೆಯೇ ಮಾಡಿದರೆಂದು ನಾವು ಹೇಳಲಾಗುವುದಿಲ್ಲ. ರಂಗಾಚಾರ್ಯರ ಅಭಿ ಪ್ರಾಯವನ್ನೂ, ಅವರ ಮಾರ್ಗವನ್ನೂ, ಅವರ ಉದ್ದೇಶಗಳನ್ನೂ ಇತರರು ಸರಿಯಾಗಿ ಗ್ರಹಿಸಿ ಅನುಸರಿಸಿದರೆಂದು ನಂಬಲು ಕಾರಣ

ಸಾಲದು. ಅವರು ಇನ್ನೂ ಕೆಲವು ವರ್ಷ ಜೀವಿಸಿದ್ದಿದ್ದರೆ ಪ್ರತಿನಿಧಿ ಸಭೆಯ ಪ್ರಭಾವವು ಈಗಿಗಿಂತಲೂ ಬಲು ಚೆನ್ನಾಗಿರುತ್ತಿತ್ತೆಂದು ನಂಬುವುದು ಯುಕ್ತವಾಗಿದೆ.

ರಂಗಾಚಾರ್ಯರು ತಮ್ಮ ಎಲ್ಲ ಕಾರ್ಯಗಳಿಗೂ ಮೂಲವಾಗಿಟ್ಟುಕೊಂಡು, ಎಲ್ಲರಿಗೂ ಉಪದೇಶಿಸುತ್ತಿದ್ದ ಮಹಾಮಂತ್ರದ ಸಾರಾಂಶವು ಈ ಮಾತುಗಳಲ್ಲಡಗಿದೆ:—"ಪ್ರಜೆಗಳನ್ನು ತುಳಿದುಹಾಕುತ್ತಿರುವ ಅಧಿಕಾರಿ ವರ್ಗದ ಅಧೀನದಿಂದ ಅವರಿಗೆ ಬಿಡುಗಡೆ ಮಾಡಿಸಿ, ಅವರು ಕೃಷಿ ವಾಣಿಜ್ಯಗಳಲ್ಲಿ ಮುಂಬರಿವಂತೆ ಮಾಡುವುದು ಹೇಗೆ?—ಎಂಬುದೇ ಇಂಡಿಯಾದೇಶದ ರಾಜ್ಯತಂತ್ರಜ್ಞರ ಮುಂದೆ ಈಗಿರತಕ್ಕ ದೊಡ್ಡ ಪ್ರಶ್ನೆ."

ಪ್ರಜಾಪ್ರತಿನಿಧಿ ಪ್ರಭುತ್ವವೆಂದರೆ—ಪ್ರಜೆಗಳು ತಮ್ಮ ಪರವಾಗಿ ಅಭಿಪ್ರಾಯ ಹೇಳುವುದಕ್ಕೋಸ್ಕರ ಆರಿಸಿ ನಿಯಮಿಸಿದ ಕೆಲಮಂದಿಯ ಸೂಚನೆಗಳನ್ನನುಸರಿಸಿ ಸರಕಾರವು ನಡೆದುಕೊಳ್ಳಬೇಕೆಂಬ ಏರ್ಪಾಟು. ಈ ವಿಧದ ವ್ಯವಸ್ಥೆಯ ಕೆಲವು ಉಪಾಂಗಗಳು ಬೇರೆಬೇರೆ ದೇಶಗಳಲ್ಲಿ ಬೇರೆಬೇರೆಯಾಗಿ ಕಂಡರೂ, ಅದರ ಮುಖ್ಯ ಲಕ್ಷಣವು ಎಲ್ಲ ಕಡೆಯೂ ಪ್ರಜಾ ಪ್ರಾಬಲ್ಯವೆಂಬುದೊಂದೇ ಆಗಿರುತ್ತದೆ. ಈ ವ್ಯವಸ್ಥೆಯನ್ನೇ ಇಂಡಿಯಾದೇಶದಲ್ಲಿ "ಸ್ವರಾಜ್ಯ"ವೆಂಬ ಹೆಸರಿನಿಂದಲೂ ಕರೆಯುತ್ತಿದ್ದಾರೆ. (ಸ್ವ=ದೇಶೀಯ ಪ್ರಜೆಗಳ, ರಾಜ್ಯ=ಆಧಿಪತ್ಯ.)

ಪ್ರಜಾಪ್ರತಿನಿಧಿನಿಷ್ಠವಾದ ಸರಕಾರವು ರಾಜೈಕನಿಷ್ಠವಾದ, ಅಥವಾ ಸಚಿವೈಕನಿಷ್ಠವಾದ, ಅಥವಾ ಇತರ ತೆರದ ಸರಕಾರಕ್ಕಿಂತ ಎರಡು ವಿಧಗಳಲ್ಲಿ ಉತ್ತಮವಾದುದೆಂದು ರಾಜ್ಯತತ್ತ್ವಜ್ಞರು ಅಭಿಪ್ರಾಯಪಟ್ಟಿರುವರು:—

(೧) ಅದು ಸರಕಾರದ ಎಲ್ಲ ಕಾಯದೆ ಕಟ್ಟುಪಾಡುಗಳೂ ತೆರಿಗೆ ತೀರ್ಮಾನಗಳೂ ಪ್ರಜೆಗಳ ಇಷ್ಟಾನುಕೂಲಗಳನ್ನೇ ಅನುಸರಿಸುವಂತೆ ಮಾಡುವುದು.

(೨) ಅದು ಪ್ರಜೆಗಳ ವಿದ್ಯೆ ಬುದ್ಧಿಗಳ ವಿಕಾಸಕ್ಕೂ, ಔದಾರ್ಯ ನೀತಿಗಳ ಅಭಿವೃದ್ಧಿಗೂ ಕಾರಣವಾಗಿ, ಅವರೆಲ್ಲರ ಗುಣ ಸಂಪತ್ತನ್ನೂ ರಾಜ್ಯಸೇವೆಗೆ ಅನುಗೊಳಿಸಿ, ಅವರ ಜೀವನ ಯೋಗ್ಯತೆಯೂ ಸ್ವಸಹಾಯ ಶಕ್ತಿಯೂ ಹೆಚ್ಚುವಂತೆ ಮಾಡುವುದು.*

---

*ಪ್ರಜಾಪ್ರತಿನಿಧಿ ಸರಕಾರದ ಈ ಎರಡು ಮುಖ್ಯ ಗುಣಗಳನ್ನು ಈ ಕೆಳಗೆ ಕಾಣಿಸಿರುವ ರೀತಿಯಲ್ಲಿ ವಿಶದಪಡಿಸಬಹುದು :—

(೧) ಪ್ರಜೆಗಳಿಗೆ ರಾಜ್ಯವು ತಮ್ಮ ಸ್ವಂತಕ್ಕೆ ಬಾಧ್ಯಪಟ್ಟುದೆಂಬ ಮಮತೆಯುಂಟಾಗಿ, ದೇಶಕಾರ್ಯಗಳ ವಿಷಯದಲ್ಲಿ ಅವರಿಗೆಲ್ಲಾ ಒಂದು ಹೊಸ ಆಸಕ್ತಿಯೂ ಶ್ರದ್ಧೆಯೂ ತಲೆದೋರಿ, ಅವರೆಲ್ಲರಲ್ಲಿಯೂ ಇರತಕ್ಕ ಬುದ್ಧಿ ಚತುರತೆಗಳೂ ನೀತಿನಿಷ್ಠೆಗಳೂ ರಾಜ್ಯದ ಕಾರ್ಯದಲ್ಲಿ ಉಪಯೋಗವಾಗುವುವು. ರಾಜನೊಬ್ಬನೇ, ಅಥವಾ ಕೆಲಮಂದಿ ಅಧಿಕಾರಿಗಳೇ ರಾಜ್ಯಭಾರ ನಡೆಸುತ್ತಿದ್ದರೆ ಪ್ರಜಾವರ್ಗಕ್ಕೆ ಈ ಭಾವನೆಯುಂಟಾಗುವ ಸಂಭವವಿರದು; ಅವರು ರಾಜ್ಯಸೇವೆಗೆ ಸೇರುವ ಅವಕಾಶವೂ ಇರದು.

(೨) ಪ್ರಜೆಗಳು ವಿಶಾಲಗಳಾದ ರಾಜಕೀಯ ವಿಚಾರಗಳಿಗೆ ಮನಸ್ಸು ಕೊಡುವುದರಿಂದ, ತಮ್ಮ ಮನೆಯೇ ತಮ್ಮ ಪ್ರಪಂಚವೆಂಬ ಸಂಕುಚಿತ ಭಾವನೆಯು ಅವರಲ್ಲಿ ಕಡಿಮೆಯಾಗಿ, ನೆರೆಹೊರೆಯ ಸುಖದುಃಖಗಳೇನು, ಊರು ದೇಶಗಳ ಲಾಭನಷ್ಟಗಳೇನು ಎಂದು ಚಿಂತಿಸುವ ಉದಾರಬುದ್ಧಿಯು ಅವರಿಗೆ ಅಭ್ಯಾಸವಾಗುವುದು. ಪ್ರಜಾಪ್ರಾಬಲ್ಯವಿಲ್ಲದ ಕಡೆ ಈ ಬಗೆಯ ನೀತಿ ಸಂಸ್ಕಾರಕ್ಕೆ ಅವಕಾಶವಿಲ್ಲ.

(೩) ಇದಲ್ಲದೆ, ಸಭೆ ಸಂಘ ಸಮಾಜ ಮುಂತಾದ ಸಾರ್ವಜನಿಕ ಸಂಸ್ಥೆಗಳಲ್ಲಿ ನಾನಾ ತರಗತಿಗಳ ಮತ್ತು ನಾನಾ ಸ್ವಭಾವಗಳ ಜನರು ಕಲೆತು ಕೆಲಸಮಾಡಬೇಕಾಗುವುದರಿಂದ, ಅವರ ಅಭಿಪ್ರಾಯ ಯೋಚನೆಗಳೂ ನಡೆನುಡಿಗಳೂ ಆ ಮೂಲಕ ಪರಸ್ಪರವಾಗಿ ಸ್ವಲ್ಪ ಮಟ್ಟಿಗಾದರೂ ತಿದ್ದುಪಾಟು ಹೊಂದಿ, ಅವರ ನಯ ವಿನಯ ಸೌಜನ್ಯ ಸೌಹಾರ್ದಗಳು ಬೆಳೆಯಲು ಅವಕಾಶವಾಗುವುದು.

(೪) ಜನರ ಬುದ್ಧಿಯು ದೊಡ್ಡದೊಡ್ಡವೂ ಕಷ್ಟಕರವೂ ಆದ ಪ್ರಸಂಗಗಳಲ್ಲಿ ಪ್ರವೇಶಿಸುವ ಕಾರಣದಿಂದ, ಅವರ ಲೌಕಿಕ ಪರಿಜ್ಞಾನವೂ ಯುಕ್ತಿ ಸಾಮರ್ಥ್ಯಗಳೂ ಬೆಳೆಯಲು ಅವಕಾಶವಾಗಿ, ಅವರ ಜಾಗರೂಕತೆಯೂ ಕಾರ್ಯಯೋಗ್ಯತೆಯೂ ಹೆಚ್ಚುವುವು.

(೫) ರಾಜ್ಯಯಂತ್ರದ ಸೂತ್ರಗಳು ವೇತನಾಪೇಕ್ಷಕರಾದ ಕಾರುಬಾರಿಗಳ ಇಷ್ಟವನ್ನು ಮಾತ್ರವೇ ಅನುಸರಿಸುವುದು ನಿಂತು, ದೇಶಹಿತಾಕಾಂಕ್ಷಿಗಳಾದ ಪ್ರಜಾಪಕ್ಷವಾದಿಗಳ ಮತವನ್ನೇ ಹೆಚ್ಚಾಗಿ ಅನುಸರಿಸಬೇಕಾಗುವುದು. ಜನರ ಕಷ್ಟ ಕೊರತೆಗಳನ್ನೂ ಆಶೆ ಅನುಕೂಲಗಳನ್ನೂ ಜನರೇ ಅರಿತಿರುವಷ್ಟು ಚೆನ್ನಾಗಿ ಅಧಿಕಾರಿಗಳು

ಪ್ರಜಾಯುತ್ತ ಪ್ರಭುತ್ವದ ಈ ಗುಣಗಳನ್ನು ರಂಗಾಚಾರ್ಯರು ಚೆನ್ನಾಗಿ ತಿಳಿದುಕೊಂಡಿದ್ದರು. ಇಂಡಿಯಾದೇಶವನ್ನಾಳುತ್ತಿರುವ ಬ್ರಿಟನ್ ದೇಶವೇ ಪ್ರಜಾಸಮ್ಮತ ಪ್ರಭುತ್ವಕ್ಕೆ ತೌರೂರು. ಫ್ರಾನ್ಸ್ ಮೊದಲಾದ ಇತರ ಐರೋಪ್ಯ ದೇಶಗಳಲ್ಲಿಯೂ, ಅಮೆರಿಕದಲ್ಲಿಯೂ ಪ್ರಜಾಪ್ರಭುತ್ವವು ಪ್ರಬಲಗೊಂಡು, ಸಂಪೂರ್ಣವಾಗಿರುವುದು. ಪ್ರಜೆಗಳಿಗೆ ಸಂಪತ್ತನ್ನು ನ್ಯಾಯ ಮಾರ್ಗದಲ್ಲಿ ಸಂಪಾದಿಸುವುದಕ್ಕೂ, ಅದನ್ನನುಭವಿಸುವುದಕ್ಕೂ, ಪರರಿಗೆ ತೊಂದರೆಮಾಡದಂತೆ ತಮಗೆ ಯುಕ್ತ ತೋರಿದ ರೀತಿಯಲ್ಲಿ ಬದುಕುವುದಕ್ಕೂ ಯಾವ ಸ್ವಾತಂತ್ರ್ಯವು ಆವಶ್ಯಕವೋ ಅದನ್ನು ಅವರಿಗೆ ಸಂಪಾದಿಸಿಕೊಡುವುದೇ ಒಳ್ಳೆಯ ರಾಜ್ಯ ವ್ಯವಸ್ಥೆಯ ಲಕ್ಷಣ. ಪ್ರಜೆಯ ಕ್ಷೇಮಲಾಭಗಳು ಅವನ ರಾಜಕೀಯ ಸ್ವಾತಂತ್ರ್ಯಕ್ಕೆ ಅನುಗುಣವಾಗಿರುವುವು. ರಾಜ್ಯಭಾರ ನಿರ್ವಾಹಕರು ತಮ್ಮ ಮನಸ್ಸಿಗೆ ತೋರಿದಂತೆ ಕಾಯಿದೆ ಕಟ್ಟಳೆಗಳನ್ನು ಏರ್ಪಡಿಸುತ್ತಿದ್ದರೆ, ರಾಜ್ಯಾಧಿಕಾರಿಗಳು ಸ್ವೇಚ್ಛೆಯಂತೆ ಕಾರುಬಾರು ನಡೆಸುತ್ತಿದ್ದರೆ, ಅದರಿಂದ ಪ್ರಜೆಗಳ—ಎಂದರೆ ಯಾರು ರಾಜ್ಯಕ್ಕೆ ಮೂಲಾಧಾರವೋ ಅವರ—ಇಷ್ಟಾರ್ಥಸಾಧನೆಗೆ ಹೇಗೆತಾನೆ ಭಂಗ ಬರದೆ ಇದ್ದೀತು? ಸರಕಾರವೂ, ಕಾನೂನು ಕಟ್ಟುಪಾಡುಗಳೂ ಇರುವುದು ಏತಕ್ಕೋಸ್ಕರ? ಅಧಿಕಾರಸ್ಥರಾದವರು

---

ಅರಿಯಲಾರರಾದ ಕಾರಣ, ಅಂಗೆ ಕಾನೂನುಗಳನ್ನೂ ಬಗೆಬಗೆಯ ಇಲಾಖೆಗಳ ಕಾರ್ಯವಿಧಾನಗಳನ್ನೂ ಜನರೇ (ತಮ್ಮ ಪ್ರತಿನಿಧಿಗಳ ಮೂಲಕ) ಗೊತ್ತುಮಾಡುವುದು ಅವರ ಹಿತಕ್ಕೆ ಪರಮಸಾಧಕವಾಗುವುದು.

(೬) ತಮ್ಮನ್ನು ಕಾದು ನೋಡುತ್ತಿರಲು ಪ್ರಜಾಪಕ್ಷದ ಸಂಸ್ಥೆಗಳಿರುವ ಕಾರಣದಿಂದ, ವೇತನೋಪಜೀವಿಗಳಾದ ಅಧಿಕಾರಸ್ಥರಲ್ಲಿ ಕರ್ತವ್ಯನಿಷ್ಠೆಯೂ ಜಾಗರೂಕತೆಯೂ ಹೆಚ್ಚಾಗುವುವು. ಮೇಲ್ವಿಚಾರಣೆಮಾಡಿ, ತಪ್ಪು ಕುಂದುಗಳನ್ನು ಕಂಡುಹಿಡಿದು, ಬಹಿರಂಗವಾಗಿ ಆಕ್ಷೇಪಣೆ ಮಾಡಬಲ್ಲ ಪ್ರಜಾಪ್ರತಿನಿಧಿಗಳಿರುವರೆಂಬ ಭಯವು ಕಾರುಬಾರಿಗಳನ್ನು ಹದ್ದಿನಲ್ಲಿಟ್ಟು, ಅವರಿಂದ ರಾಜ್ಯಕಾರ್ಯಗಳನ್ನು ಸಮರ್ಪಕವಾದ ರೀತಿಯಲ್ಲಿ ಆಗಮಾಡಿಸುವುದು. ಪ್ರಜಾಪ್ರಾಬಲ್ಯವಿಲ್ಲದ ರಾಜ್ಯದಲ್ಲಿ ಈ ತೆರದ ಭೀತಿಯಿಲ್ಲದಿರುವುದರಿಂದ, ಅಲ್ಲಿ ಅಕ್ರಮಗಳೂ ಅನಾಯಕತ್ವವೂ ಉಂಟಾಗುವುದು ಸುಲಭ.

ಜನರಿಂದ ಕಂದಾಯಕವಳಿಗೆಗಳನ್ನು ವಸೂಲು ಮಾಡಿಸಿ, ಅದರಿಂದ ಸಂಬಳ ತೆಗೆದುಕೊಂಡು ಮೆರೆಯುವುದಕ್ಕೋಸ್ಕರವಲ್ಲ. ಅವೆಲ್ಲವೂ ಪ್ರಜೆಗಳಿಗೆ ಕೂಡಿದಷ್ಟು ಹೆಚ್ಚಾದ ಸುಖವನ್ನು ಸಂಪಾದಿಸಲು ನಿರ್ಮಿಸಲ್ಪಟ್ಟ ಸಾಧನಗಳು. ಆದಕಾರಣ, ರಾಜ್ಯಭಾರವನ್ನು ಹೊತ್ತುಕೊಂಡಿರುವವರು ತಮ್ಮ ಆಡಳಿತದಲ್ಲಿ ಪ್ರಜೆಗಳ ಅಭಿಮತವನ್ನು ಸಾಧ್ಯವಾದಷ್ಟೂ ಗೌರವಿಸಬೇಕು. ಹಾಗೆ ಮಾಡದಿದ್ದರೆ, ಪ್ರಜೆಗಳ ಬೆಳೆವಳಿಕೆಗೆ ಕುಂದಕವುಂಟಾಗಿ, ಅವರಲ್ಲಿ ಅಸಮಾಧಾನವು ನೆಲೆಗೊಳ್ಳುವುದು. ಅದರಿಂದ ರಾಜ್ಯವು ಕೆಟ್ಟು ಕ್ಷೀಣದಶೆಗೆ ಇಳಿಯುವುದು. ಈ ತತ್ತ್ವವು ರಂಗಾಚಾರ್ಯರ ಮನಸ್ಸಿನಲ್ಲಿ ಆಳವಾಗಿ ನಾಟಿತ್ತು. ಪ್ರಪಂಚದಲ್ಲಿ ನಾಗರಿಕತೆಗೆ ಬಂದಿರುವ ದೇಶಗಳಲ್ಲೆಲ್ಲಾ ಈಚೆಗೆ ಈ ತತ್ತ್ವವು ವಿಶೇಷವಾಗಿ ಪ್ರಕಾಶಕ್ಕೆ ಬಂದಿದೆ.

ಈಗ ಎಲ್ಲೆಲ್ಲಿಯೂ ಪ್ರಜಾಪ್ರತಿನಿಧಿ ಸರಕಾರವೇ ಮನುಷ್ಯನ ಬುದ್ಧಿಗೆ ತೋರಿದುದರಲ್ಲಿ ಸರ್ವೋತ್ತಮವಾದ ರಾಜ್ಯ ವ್ಯವಸ್ಥೆಯೆಂದು ಜನರಿಗೆ ನಂಬುಗೆಯುಂಟಾಗಿದೆ. ರಂಗಾಚಾರ್ಯರ ಕಾಲದಲ್ಲಿ ಈ ವಿಧವಾದ ಅಭಿಪ್ರಾಯವು ಇಂಡಿಯಾದೇಶದಲ್ಲಿ ಈಗಿನಷ್ಟು ದೃಢವಾಗಿ ಬೇರೂರಿರಲಿಲ್ಲ. ಪಾರ್ಲಿಮೆಂಟೆಂಬ ಪ್ರಜಾಪ್ರತಿನಿಧಿ ಸಭೆಯ ಅಧಿಕಾರಕ್ಕೊಳಪಟ್ಟಿರತಕ್ಕ ಸಾಂಕುಶ ಪ್ರಭುತ್ವಕ್ಕೆ (ಲಿಮಿಟೆಡ್ ಮಾನಾರ್ಕಿ) ಇಂಗ್ಲೆಂಡ್ ದೇಶವೇ ಆವಾಸಸ್ಥಾನವಾಗಿದ್ದರೂ, ಆ ಇಂಗ್ಲೆಂಡಿನ ಆಧಿಪತ್ಯಕ್ಕೊಳಪಟ್ಟ ಇಂಡಿಯಾದೇಶದಲ್ಲಿ ಅಂತಹ ಸಭೆಯೊಂದೂ ಮೈಸೂರಿನ ಪ್ರಜಾಪ್ರತಿನಿಧಿ ಸಭೆಯು ಏರ್ಪಾಡಾದ ಕಾಲದಲ್ಲಿ ಇರಲಿಲ್ಲ. ಹೀಗೆ ಯಾವ ಮಾದರಿಯೂ ಇಲ್ಲದಿದ್ದ ಕಾಲದಲ್ಲಿ,—ಈಗಿಗೆ ೪೮ ವರ್ಷಗಳ ಕೆಳಗೆ,—ರಾಜ್ಯಕಾರ್ಯನಿರ್ವಾಹದಲ್ಲಿ ಭಾಗಿಗಳಾಗಲು ಪ್ರಜೆಗಳಿಗೂ ಅವಕಾಶವನ್ನುಂಟುಮಾಡಿಕೊಟ್ಟ ರಂಗಾಚಾರ್ಯರ ದೂರದೃಷ್ಟಿಯನ್ನೂ, ಪ್ರಜಾಭಿಮಾನವನ್ನೂ ನಾವು ಎಷ್ಟು ಕೊಂಡಾಡಿದರೆ ತಾನೆ ತೀರೀತು ? ರಂಗಾಚಾರ್ಯರ ಕೀರ್ತಿಯೆಲ್ಲವೂ ಒಂದೇ ಮಾತಿನಲ್ಲಿ ನಿಂತಿದೆ: ಆ ಮಾತು "ಪ್ರಜಾಪಕ್ಷಪಾತಿತ್ವ."

ಕ್ರಿ. ಶ. ೧೮೮೧ನೆಯ ಆಗಸ್ಟ್ ೨೫ನೆಯ ತಾರೀಖಿನ ದಿನ ಮೈಸೂರು ಪ್ರಜಾಪ್ರತಿನಿಧಿ ಸಭೆಯ ಪ್ರತಿಷ್ಠಾ ವೃತ್ತಾಂತವು ಪ್ರಸಿದ್ಧಿ ಪಡಿಸಲ್ಪಟ್ಟಿತು. ಆ ಸಭೆಯ ಉದ್ದೇಶಗಳು ಈ ರೀತಿ ವಿವರಿಸಲ್ಪಟ್ಟಿವೆ:—

**"ಈ ಸಂಸ್ಥಾನದ ರಾಜ್ಯಭಾರ ನಿರ್ವಾಹದಲ್ಲಿ ನಡೆಯಿಸಲ್ಪಡುವ ಏರ್ಪಾಡುಗಳ ವಿಷಯವಾಗಿ ಸರಕಾರಕ್ಕಿರುವ ಅಭಿಪ್ರಾಯಗಳೂ, ಉದ್ದೇಶ್ಯಗಳೂ, ಯಾರ ಪ್ರಯೋಜನಕ್ಕಾಗಿ ಆ ಏರ್ಪಾಟುಗಳು ನಡೆಯುವುವೋ ಅಂಥಾ ಪ್ರಜೆಗಳಿಗೆ ಈಗಿರುವುದಕ್ಕಿಂತಲೂ ಚೆನ್ನಾಗಿ ತಿಳಿದುಬಂದು, ಅವರಿಗೆ ತೃಪ್ತಿಯುಂಟಾಗಬೇಕೆಂಬುದು ಶ್ರೀಮನ್ಮಹಾರಾಜರವರ ಕುತೂಹಲ. ದೇಶದ ಎಲ್ಲಾ ಭಾಗಗಳ ಪ್ರಮುಖರಾದ ಜಮೀನ್‌ದಾರರೂ, ವರ್ತಕರೂ ವರ್ಷಕ್ಕೊಂದಾವರ್ತಿ ಸಭೆ ಸೇರಿ, ಆ ಸಭೆಗೆ ದಿವಾನರವರು ಹಿಂದಿನ ವರ್ಷದ ಆಡಳಿತದ ಫಲಿತಾಂಶಗಳನ್ನೂ ಮುಂದಿನ ವರ್ಷದಲ್ಲಿ ಮಾಡಬೇಕೆಂದಿರುವ ಕಾರ್ಯಕಲಾಪಗಳನ್ನೂ ಸೂಚಿಸುವುದರ ಮೂಲಕ ಆ ಕುತೂಹಲವು ನೆರವೇರಲು ಪ್ರಾರಂಭವಾಗಬಹುದೆಂದು ಶ್ರೀಮನ್ಮಹಾರಾಜರವರು ತಾತ್ಪರ್ಯಪಟ್ಟಿರುವರು.**

**"ಈ ಸಭೆಯ ಏರ್ಪಾಡು, ಪ್ರಜೆಗಳನ್ನು ಸರಕಾರದೊಂದಿಗೆ ಸೇರಿಸುವುದರಿಂದ, ಅದು ಅವರ ಮನಸ್ಸಿನಲ್ಲಿ ಸರಕಾರದ ಆಶಯ ಕಾರ್ಯಕ್ರಮಗಳ ವಿಷಯವಾಗಿ ಇರಬಹುದಾದ ದುರಭಿಪ್ರಾಯಗಳನ್ನು ಹೋಗಲಾಡಿಸಿ, ತಮ್ಮ ಪ್ರಯೋಜನವೇ ಸರಕಾರದ ಪ್ರಯೋಜನವೆಂಬ ಭಾವವನ್ನು ಅವರ ಚಿತ್ತದಲ್ಲಿ ನಾಟಿಸುವುದು."**

ಹೀಗೆ ಸ್ಥಾಪಿತವಾದ ಸಭೆಗೆ ಮೊದಲನೆಯ ವರ್ಷ ಪ್ರತಿ ತಾಲ್ಲೂಕಿನಿಂದಲೂ ಒಬ್ಬರಿಬ್ಬರು ಜಮೀನ್‌ದಾರರೂ, ಪ್ರತಿ ಡಿಸ್ಟ್ರಿಕ್ಟಿನಿಂದಲೂ ಮೂರು ನಾಲ್ಕು ಮಂದಿ ವರ್ತಕರೂ ಕರೆಯಿಸಲ್ಪಟ್ಟರು. ಅವರೆಲ್ಲರೂ ಸರಕಾರದಿಂದಲೇ ಚುನಾಯಿಸಲ್ಪಟ್ಟು, ಅವರ ಪ್ರಯಾಣದ ವೆಚ್ಚಗಳೆಲ್ಲಾ ಸರಕಾರದಿಂದ ಕೊಡಲ್ಪಟ್ಟವು. ಆ ಸಭೆಯು ೧೮೮೧ನೆಯ ಅಕ್ಟೋಬರು ೭ರಲ್ಲಿ ಮೈಸೂರು ರಾಜಧಾನಿಯಲ್ಲಿ ನಡೆಯಿತು. ೧೪೪ ಮಂದಿ ಪ್ರಜಾಪ್ರತಿನಿಧಿಗಳು ಬಂದಿದ್ದರು. ಆಗ ರಂಗಾಚಾರ್ಯರು ಮಾಡಿದ ಉಪನ್ಯಾಸದಲ್ಲಿ ಸರಕಾರವು ಪ್ರಜೆಗಳ ಇಷ್ಟ ಪ್ರಯೋಜನಗಳಿಗೆ ತಕ್ಕಂತೆ ನಡೆದುಕೊಳ್ಳಲು ಆ ಸಭೆಯು ಸಾಧಕವಾದೀತೆಂದೂ, ಪ್ರಜಾ ಹಿತಕ್ಕಾಗಿ ಪ್ರತಿನಿಧಿಗಳು ಹೇಳಲಪೇಕ್ಷಿಸುವ ವಿಜ್ಞಾಪನೆಗಳನ್ನೂ ಸಲಹೆಗಳನ್ನೂ ಶ್ರೀಮನ್ಮಹಾರಾಜರ ಸರಕಾರವು ಆದರದಿಂದ

ಸ್ವೀಕರಿಸುವುದೆಂದೂ ಸೂಚಿಸಿದರು. ಅವರ ಭಾಷಣದಲ್ಲಿಯ ಮುಖ್ಯ ವಿಷಯಗಳಲ್ಲಿ ಕೆಲವನ್ನು ಹಿಂದೆ ತಿಳಿಸಿದೆ. ಈ ಸಭೆಯಲ್ಲಿ ಪ್ರತಿನಿಧಿಗಳು 'ರೆವೆನ್ಯೂ', 'ಫಾರೆಸ್ಟ್' ಮುಂತಾದ ಕೆಲವು ಇಲಾಖೆಗಳ ಕಾಯಿದೆಗಳ ವಿಷಯಗಳನ್ನು ಕೇಳಿ ತಿಳಿದುಕೊಂಡರಲ್ಲದೆ, ಆಯಾ ಬಾಬುಗಳಲ್ಲಿ ತಮಗಿದ್ದ ಕಷ್ಟಗಳನ್ನು ವಿವರಿಸಿಕೊಂಡರು. ಅವರ ಆಗಿನ ನಡೆವಳಿಕೆಯು ಯಥಾಯೋಗ್ಯವಾಗಿಯೂ, ರಂಗಾಚಾರ್ಯರ ಮನಸ್ಸಿಗೆ ಸಮರ್ಪಕವಾದುದಾಗಿಯೂ ಇತ್ತು.

ಸಭೆಯಿಂದ ಪ್ರಜೆಗಳಿಗೆ ಒಂದು ಅಪೂರ್ವವಾದ ವರವು ದೊರೆತಂತಾಯಿತಲ್ಲವೆ? ಕಿರುಕುಳಪಡುವ ಸಂದರ್ಭದಲ್ಲಿ ಹೊರತು ಸರಕಾರವೆಂದರೇನೆಂಬುದನ್ನು ತಿಳಿಯದೆ, ಕಾರ್ಯಭಾರಿ ವರ್ಗದ ನಾನಾ ವಿಧವಾದ ಹಿಂಸೆಗಳಿಗೆ ಗುರಿಯಾಗಿ, ಕಂದಾಯಕವಳಿಗೆ ತೆರುವುದರ ವಿನಾ ತಮಗೂ ರಾಜ್ಯಕ್ಕೂ ಸಂಬಂಧವಾವುದೂ ಇಲ್ಲವೆಂದು ತಿಳಿದಿದ್ದ ಅವರಿಗೆ, ಅವರ ನ್ಯಾಯವಾದ ಹಕ್ಕುಬಾಧ್ಯತೆಗಳನ್ನು ತಿಳಿಸಿಕೊಟ್ಟು, ಅವುಗಳನ್ನು ನಡೆಯಿಸಿಕೊಂಡು ಬರುವುದಕ್ಕೂ ಈ ಹೊಸ ದೇಶೀಯ ಪ್ರಭುತ್ವವೇ ಪ್ರಾರಂಭ ಮಾಡಿದುದರಿಂದ ಉಂಟಾದ ಸಂತೋಷವು ಮೇರೆಯರಿಯದುದಾಯಿತು. ಎರಡನೆಯ ಪ್ರಜಾಪ್ರತಿನಿಧಿ ಸಭೆಯು ೧೮೮೨ನೆಯ ವರ್ಷದ ದಸರಾ ಹಬ್ಬದಲ್ಲಿ ಸೇರಿತು. ಸುಮಾರು ಹಿಂದಿನ ವರ್ಷದಷ್ಟು ಮಂದಿ ಸಭಿಕರು ಸೇರಿದ್ದರು. ರಂಗಾಚಾರ್ಯರು ಆಗ ಮಾಡಿದ ಭಾಷಣವು ಈಗಲೂ ಜನರ ಸ್ಮರಣೆಯಲ್ಲಿ ನಿಂತಿರುವುದಲ್ಲದೆ, ಅದನ್ನು ಅದರಲ್ಲಿನ ಸಾರಕ್ಕಾಗಿ ರಾಜ್ಯತಂತ್ರನಿಪುಣರು ಆಗಾಗ ಉದಾಹರಿಸುವರು.

ಪ್ರಜಾಪ್ರತಿನಿಧಿ ಸಭೆಯನ್ನು ಸಂಸ್ಥಾಪಿಸಿದುದು ಸುಲಭ ಕಾರ್ಯವೇನೂ ಅಲ್ಲ. ಅನೇಕರು ಅದಕ್ಕೆ ಅಡ್ಡಹೇಳುತ್ತಿದ್ದರು. ಅನೇಕರು ಅದು ಬರಿಯ ಜಂಬದ ಕೆಲಸವೆಂದು ಒದರುತ್ತಿದ್ದರು. ಈ ದೇಶದ ಜನರು ಇನ್ನೂ ಪ್ರಜಾಪ್ರತಿನಿಧಿ ಪ್ರಭುತ್ವ ಅಥವಾ ಸ್ವರಾಜ್ಯಕ್ಕೆ ಅರ್ಹರಾಗಿಲ್ಲವೆಂದು ಅನೇಕರು ಅಲ್ಲಗಳೆಯುತ್ತಿದ್ದರು. ರಂಗಾಚಾರ್ಯರು ಅವರನ್ನು ಲೆಕ್ಕಿಸದೆ ತಮ್ಮ ಸಂಕಲ್ಪವನ್ನು

ಪೂರ್ತಿಗೊಳಿಸಿದರು. ಅವರ ಉಪನ್ಯಾಸವು ಅವರ ಪ್ರತಿವಾದಿಗಳ ಬಾಯಿಗೆ ಭದ್ರವಾದ ಬೀಗದಂತಿರುವುದು :—

"ಇದು ಪ್ರಜಾಪ್ರತಿನಿಧಿಗಳ ದ್ವಿತೀಯ ವಾರ್ಷಿಕ ಸಭೆ. ಈ ಸಭೆಗೆ ಶ್ರೀಮನ್ಮಹಾರಾಜರವರ ಅಪ್ಪಣೆಯಂತೆ ಹಿಂದಿನ ಸಂವತ್ಸರದ ರಾಜ್ಯಭಾರಕ್ಕೆ ಸಂಬಂಧಪಟ್ಟ ಮುಖ್ಯ ಸಂಗತಿಗಳನ್ನೂ ಬರುವ ಸಂವತ್ಸರದಲ್ಲಿ ಮಾಡಬೇಕೆಂದಿರುವ ಏರ್ಪಾಟುಗಳನ್ನೂ ತಿಳಿಯಪಡಿಸುವುದು ನನ್ನ ಕೆಲಸ. ಶ್ರೀಮನ್ಮಹಾರಾಜರವರು ಪ್ರಜಾಸಮ್ಮತವಾದ ಈ ಸಭೆಯನ್ನೇರ್ಪಾಟು ಮಾಡಿದ ಬಳಿಕ, ಇಂಡಿಯಾ ಸರಕಾರದವರೂ ತಮ್ಮ ಆಧಿಪತ್ಯಗಳಲ್ಲೆಲ್ಲಾ ಸ್ಥಳೀಯ ವಿಷಯಗಳ ಆಡಳಿತದಲ್ಲಿ ಜನರಿಗೆ 'ಸ್ವರಾಜ್ಯ'ವನ್ನು ಕೊಡಲು ಏರ್ಪಾಟು ಮಾಡಬೇಕೆಂದು ನಿಶ್ಚಯಿಸಿರುವುದು ಸಂತೋಷಕರವೇ ಸರಿ. ಅವರ ೧೮೮೨ನೆಯ ಮೇ ೧೮ನೆಯ ತಾರೀಖಿನ ಹುಕುಮು ಈ ವಿಷಯದಲ್ಲಿ ಅವರು ಮಾಡಿರುವ ತೀರ್ಮಾನವನ್ನೊಳಗೊಂಡಿದೆ. ಅದರಲ್ಲಿ ತೋರಿಬರುವ ಶ್ರದ್ಧಾದರಗಳಿಂದಲೂ, ಮನೋವೈಶಾಲ್ಯದಿಂದಲೂ, ದೂರಾಲೋಚನೆಯಿಂದಲೂ ಆ ಹುಕುಮು ಇಂಡಿಯಾ ಸರಕಾರದ ಆಡಳಿತದಲ್ಲಿ ಒಂದು ನೂತನ ಯುಗವನ್ನೇ ಸ್ಥಾಪಿಸಿರುವುದೆಂದು ನಾವು ಧಾರಾಳವಾಗಿ ಭಾವಿಸಬಹುದು. ದಕ್ಷಿಣ ದೇಶದಲ್ಲೆಲ್ಲವೂ, ಇಂಡಿಯಾದೇಶದ ಇತರ ಭಾಗಗಳಲ್ಲಿಯೂ ಸಹ, ಅದು ಸಂಪೂರ್ಣವಾದ ತೃಪ್ತಿಯನ್ನುಂಟುಮಾಡಿರುವುದೇ, ಜನರು ಆ ಏರ್ಪಾಡಿಗೆ ಎಷ್ಟೊಂದು ಬೆಲೆ ಕೊಟ್ಟಿರುವರೆಂಬುದಕ್ಕೆ ದೃಷ್ಟಾಂತವಾಗಿದೆ; ಅದಲ್ಲದೆ, ಅದು ಜನರು ಸ್ವರಾಜ್ಯಕ್ಕೆ ಇನ್ನೂ ಯೋಗ್ಯರಾಗಿಲ್ಲವೆಂಬ ವಾದವನ್ನು ಖಂಡಿಸುತ್ತದೆ. ಸಾಮಾನ್ಯ ಜನರಲ್ಲೆಲ್ಲಾ ಪ್ರೌಢ ವಿದ್ಯಾಭ್ಯಾಸವು ಹರಡುವವರೆಗೂ ಅವರು ಸ್ವರಾಜ್ಯಕ್ಕೆ ಅರ್ಹರಾಗಲಾರರೆಂದು ಹೇಳುವ ಪಕ್ಷದಲ್ಲಿ, ಅಂಥಾ ಕಾಲದ ನಿರೀಕ್ಷಣೆಯಲ್ಲಿಯೇ ನಾವು ಎಂದೆಂದಿಗೂ ಇದ್ದುಬಿಡಬೇಕಾದೀತು. ಆದರೆ, ಏತನ್ಮಧ್ಯೆ ನಿರಂಕುಶ ಪ್ರಭುತ್ವದಲ್ಲಿ ವರ್ಷಗಳು ಕಳೆದ ಹಾಗೆಲ್ಲಾ, ಜನರು ಪ್ರಜಾಪ್ರತಿನಿಧಿ ಸಭೆಗಳನ್ನು ಪಡೆಯಲು ತಮಗೆ ಈಗ ಇರುವ (ಅಲ್ಪಸ್ವಲ್ಪ) ಯೋಗ್ಯತೆಯನ್ನೂ ಸಹ ಕಳೆದುಕೊಳ್ಳುವರು. ಮುಂದಾಳುಗಳಾಗಿದ್ದುಕೊಂಡು ಇತರರಿಗೆ ದಾರಿ ತೋರಿಸುವುದಕ್ಕೆ ಈಗ ಈ ಸಭೆಯಲ್ಲಿರುವ ಕೆಲಮಂದಿ ವಿದ್ಯಾವಂತರು ಸಾಕು. ಪ್ರಜಾಪ್ರತಿನಿಧಿಗಳೆಲ್ಲರಲ್ಲಿಯೂ ಸಾಮಾನ್ಯವಾಗಿರಬೇಕಾದುದು ಅನುಭವಜನ್ಯವಾದ ಜ್ಞಾನ ಮತ್ತು ಪ್ರಕೃತ ಕಾರ್ಯೋಪಯುಕ್ತವಾದ ವಿವೇಕ. ಇವೆರಡೂ ಹಿಂದೆ ಸಭೆ ಸೇರಿದ್ದಾಗ ನಿಮ್ಮ ಚರ್ಚೆಗಳಲ್ಲಿ ಕಂಡುಬರುತ್ತಿದ್ದುವು. ಕೃಷಿ ಮೊದಲಾದ ಕಸಬುಗಳಲ್ಲಿರುವ ಸಾಮಾನ್ಯ ಜ್ಞಾನಸಂಪನ್ನರಾದ ಜನರಲ್ಲಿ ಇವು ಇದ್ದೇ ಇರುವುವು. ಇಂಡಿಯಾ ಸರಕಾರದವರು ಸೂಚಿಸಿರುವಂತೆ,—ವಿಚಕ್ಷಣಪರರಾಗಿಯೂ,

ಕಾರ್ಯನಿರ್ವಾಹಕ ಶಕ್ತಿಯುಳ್ಳವರಾಗಿಯೂ, ಶ್ರದ್ಧಾವಂತರಾಗಿಯೂ ಇರುವ ಅಧಿಕಾರಿಗಳ ಮೇಲ್ವಿಚಾರಣೆಗೆ ಒಳಪಟ್ಟು—ಪ್ರಜಾಪ್ರತಿನಿಧಿ ಕರ್ತವ್ಯಗಳನ್ನು ನೆರವೇರಿಸಿ, ಜವಾಬುದಾರಿಗಳನ್ನು ಸ್ವತಃ ನಿರ್ವಹಿಸುವುದರ ಮೂಲಕವೇ ಸ್ವರಾಜ್ಯಕ್ಕೆ ಅರ್ಹತೆಯುನ್ನುಂಟುಮಾಡುವ (ರಾಜಕೀಯ) ವಿದ್ಯೆಯನ್ನು ಜನರು ಸಂಪಾದಿಸಬಹುದು ; ಅನ್ಯಥಾ ಅಲ್ಲ. ಸ್ವರಾಜ್ಯ ಪ್ರಯತ್ನವು ಸಾರ್ಥಕವಾಗುವುದಕ್ಕೆ ಜನರ ಗ್ರಾಮಾಭಿಮಾನ ಸಮಾಜಾಭಿಮಾನಗಳು ಎಷ್ಟು ಮಟ್ಟಿಗೆ ಮುಖ್ಯವೋ ಇಂಗ್ಲಿಷ್ ವಿದ್ಯಾಭ್ಯಾಸವು ಅಷ್ಟು ಮುಖ್ಯವಲ್ಲ. ಇಂತಹ ಪ್ರಜಾಪ್ರತಿನಿಧಿ ಸಭೆಗಳಲ್ಲಿ, ಸಭಿಕರಿಗೆ ಉತ್ಸಾಹಶೂನ್ಯವಾಗುವುದಕ್ಕೂ ಅವರಲ್ಲಿ ಕಕ್ಷಿಗಳುಂಟಾಗಿ ವೈಷಮ್ಯಗಳು ಬೆಳೆಯುವುದಕ್ಕೂ ಅವಕಾಶ ಕೊಡದಂತೆ ಜಾಗರೂಕರಾಗಿರತಕ್ಕುದು ಆವಶ್ಯಕ. ಡಿಸ್ಟ್ರಿಕ್ಟು ಅಧಿಕಾರಿಗಳು ಈ ಸಭಾ ವಿಷಯದಲ್ಲಿ ನಿಶ್ಚಯವಾದ ಶ್ರದ್ಧೆಯನ್ನು ತೋರಿಸಿ, ಸಭಿಕರಿಗೆ ತಮ್ಮ ಸಲಹೆಗಳನ್ನು ಕೊಟ್ಟು ಪ್ರೋತ್ಸಾಹಿಸುವುದರಿಂದ ಆ ದೋಷಗಳನ್ನು ಪರಿಹರಿಸಬಹುದು. ಪ್ರತಿನಿಧಿಗಳು ಗುರುತರಗಳಾದ ತಮ್ಮ ಕರ್ತವ್ಯಗಳನ್ನು ನೆರವೇರಿಸುವುದರಲ್ಲಿ ನಿಷ್ಕಪಟವಾದ ಪ್ರಜಾಹಿತಚಿಂತನೆಯಿಂದ ಕೂಡಿ, ಸ್ವಪ್ರಯೋಜನವನ್ನೂ ಸ್ವಜನ ಸ್ವಜಾತಿಗಳ ಪ್ರಯೋಜನಗಳನ್ನೂ ಮಾತ್ರವೇ ಲೆಕ್ಕಿಸದೆ, ದೇಶೀಯರೆಲ್ಲರ ಪ್ರಯೋಜನಾಪೇಕ್ಷೆಯಿಂದಲೇ ವರ್ತಿಸುವರೆಂದು ನಿರೀಕ್ಷಿಸಲ್ಪಟ್ಟಿದೆ. ಈ ಅಂಶವನ್ನು ಎಷ್ಟು ಸಾರಿ ಒತ್ತಿ ಹೇಳಿದರೂ ಸಾಲದು. ಹೀಗಿದ್ದರೂ, ಸರಕಾರದ ಅಧಿಕಾರಿಗಳೂ ಸಹ, ಅವರಷ್ಟು ವಿಷಯ ಪರಿಶ್ರಮವಿಲ್ಲದ ಪ್ರಜಾಪ್ರತಿನಿಧಿಗಳಂತೆಯೇ, ಈ (ಸಭಾ) ವಿಚಾರದಲ್ಲಿ ಇನ್ನೂ ಬಹು ಸಂಗತಿಗಳನ್ನು ಕಲಿತುಕೊಳ್ಳಬೇಕಾಗಿದೆ ಎಂಬುದನ್ನು ಮರೆಮಾಚಲಾಗುವುದಿಲ್ಲ. ಪ್ರಜಾ ಸೌಖ್ಯವನ್ನು ಹೆಚ್ಚಿಸಿ, ಆ ಮೂಲಕವಾಗಿ ಮೆಹನತ್ತು ತೋರಿಸಿ, ಪ್ರಯೋಜನ ಹೊಂದಬೇಕೆಂಬ ಆಶೆಯು ಅಧಿಕಾರಿಗಳಲ್ಲಿ ಏನಾದರೊಂದು ಒಳ್ಳೆಯ ಕೆಲಸ ಮಾಡಬೇಕೆಂಬ ಅಪೇಕ್ಷೆಯನ್ನು ಹುಟ್ಟಿಸುವುದು. ಇಂತಹ ಸಮಯದಲ್ಲಿ ಮತ್ತಾರಾದರೂ ಭಿನ್ನಾಭಿಪ್ರಾಯವುಳ್ಳವರಾಗಿ ಇದಿರು ಹೇಳಿದರೆ, ಅವರು (ಅಧಿಕಾರಿಗಳು) ತಾಳ್ಮೆಯಿಲ್ಲದವರಾಗುವದು ಅತಿಶಯವೇನೂ ಅಲ್ಲ. ಹೀಗಾಗುವುದಕ್ಕೆ ಬದಲಾಗಿ, ಅವರು ಶ್ರೇಷ್ಠತರ ಗುಣವಾದ ಸಹನೆಯನ್ನವಲಂಬಿಸಿ, ಪ್ರಜಾವರ್ಗದವರು ಹೋಗುವ ಮಾರ್ಗವನ್ನು ಆದರದಿಂದ ನೋಡುತ್ತಿದ್ದು, ಪ್ರಜಾಹಿತವನ್ನು ಹೆಚ್ಚಿಸುವುದರಲ್ಲಿ ತಮಗಿರುವ ಶ್ರದ್ಧೆಯನ್ನು ಕಡಿಮೆಯಾಗಿಸದೆ, ಸಲಹೆಗಳಿಂದಲೂ ಹಿತೋಪದೇಶಗಳಿಂದಲೂ ಆ ಪ್ರಜಾಜನರು ತಪ್ಪು ಹೆಜ್ಜೆಯನ್ನಿಡದಂತೆ ನಡೆಯಿಸಬೇಕು. ಮ್ಯುನಿಸಿಪಾಲಿಟಿಗೆ (ಗ್ರಾಮಕಾರ್ಯನಿರ್ವಾಹಕ ಸಭೆ) ಸಂಬಂಧಪಟ್ಟ ಮತ್ತು ಇತರವಾದ ಕಾರ್ಯಗಳಲ್ಲಿ, ಜನರಿಗೆ ಆಯಾ ವಿಷಯವಾಗಿ ಒಳ್ಳೆಯ ತಿಳಿವಳಿಕೆಯನ್ನುಂಟುಮಾಡಿಕೊಟ್ಟು, ಮುಂದಿನ ಕಾರ್ಯಭಾಗವನ್ನು ಅವರೇ ಸ್ವತಃ ನೆರವೇರಿಸಿಕೊಳ್ಳುವಂತೆ ಬಿಡುವುದರಿಂದ—ಸರಕಾರದವರೇ

ಎಲ್ಲಾ ಕೆಲಸವನ್ನು ಮಾಡುವುದಕ್ಕಿಂತಲೂ ಅಧಿಕವಾಗಿ ಪ್ರಜೆಗಳಿಗೆ ಪ್ರಯೋಜನವಾದೀತೆಂಬ ತತ್ತ್ವವನ್ನು ಡಿಸ್ಟ್ರಿಕ್ಟ್ ಅಧಿಕಾರಿಗಳು ಚೆನ್ನಾಗಿ ಮನಸ್ಸಿಗೆ ತಂದುಕೊಳ್ಳಬೇಕು. ಜನರು ತಾವಾಗಿ ಸಾಧಿಸಿದ ಕಾರ್ಯವು ಸರಕಾರದವರು ಮಾಡಿದಷ್ಟು ಜಾಗ್ರತೆಯಾಗಿಯೂ ಸಂಪೂರ್ಣವಾಗಿಯೂ ಆಗದಿದ್ದರೂ, ಅದರ ಫಲವು ಬಹು ದಿನಗಳವರೆಗೂ ಇರುವುದು. ಜನರು ಮಾಡಿದ ಕೆಲಸಗಳ ಫಲವು ಪ್ರಜೆಗಳಿಗೆಲ್ಲಾ ಅನುಭವಕ್ಕೆ ಬರುವುದಲ್ಲದೆ, ಅಧಿಕಾರಿಗಳು ಮಾಡುವ ಕೆಲಸಗಳಂತೆ ಪದೇ ಪದೇ ಬದಲಾಯಿಸಲ್ಪಡಬೇಕಾಗುವುದಿಲ್ಲ.''

ಈ ಉಪನ್ಯಾಸವನ್ನು ನಮ್ಮ ಜನರು ಪುನಃಪುನಃ ಓದಿ ಮನಸ್ಸಿನಲ್ಲಿ ದೃಢವಾಗಿ ನಿಲ್ಲಿಸಿಕೊಳ್ಳಬೇಕು. ನಮ್ಮಲ್ಲಿ ಯಾವ ಕೆಲಸ ನಡೆಯಬೇಕಾಗಿದ್ದರೂ ಅಧಿಕಾರಿಗಳಿಲ್ಲದಿದ್ದರೆ ಆಗದು. ದೇವಸ್ಥಾನಗಳಲ್ಲಿಯಾಗಲಿ, ಧರ್ಮಕಾರ್ಯಗಳಲ್ಲಿಯಾಗಲಿ, ಉತ್ಸವ ಕಾಲಗಳಲ್ಲಿಯಾಗಲಿ, ವಾಚಕಶಾಲೆ ಮೊದಲಾದ ಸಭಾಸ್ಥಾನಗಳಲ್ಲಿಯಾಗಲಿ, ಕಡೆಗೆ ಮದುವೆ ಮುಂಜಿ ಮೆರವಣಿಗೆಗಳಲ್ಲಿಯೂ ಕೂಡ, ಎಲ್ಲಿ ನೋಡಿದರೂ 'ಕಛೇರಿಯ ಜನ'ಗಳೇ ವಿಜೃಂಭಿಸುವರು. ಅವರಿಲ್ಲದೆ ಯಾವ ಕಾರ್ಯವೂ ಸಾಗದು. ಆದರೆ ಅವರು ಮಾಡುವ ಕಾರ್ಯಗಳು ಯಾವುವೂ ಚಿರಸ್ಥಾಯಿಯಾಗಲಾರವು. ಒಬ್ಬನು ಉಪಕ್ರಮಿಸಿದ ಕೆಲಸವನ್ನು ಅವನ ಅನಂತರ ಬಂದವನು ಮೂಲೆಗೆ ತಳ್ಳಿ, ತಾನೊಂದು ಹೊಸ ಕೆಲಸವನ್ನಾರಂಭಿಸುವನು. ಹೀಗೆಯೇ ಒಬ್ಬೊಬ್ಬ ಅಧಿಕಾರಿಯೂ ತಾನು ಹಿಡಿದ ಕೆಲಸವನ್ನು ಮುಗಿಸುವುದರೊಳಗಾಗಿ ವರ್ಗವಾಗುವುದರಿಂದಲೋ ಇನ್ನಾವ ಕಾರಣದಿಂದಲೋ ದೂರವಾಗಿ, ಮತ್ತೊಬ್ಬನು ಅದನ್ನು ಊರ್ಜಿತಪಡಿಸದೆ ಹೋಗಿ, ಅಂತೂ ಇಂತೂ ಪ್ರಜೆಗಳಿಗೇನೋ ಶಾಶ್ವತವಾದ ಪ್ರಯೋಜನವಾಗುವುದಿಲ್ಲ. ಅವರ ಹಣ ಮಾತ್ರ ವೆಚ್ಚವಾಗಿ ಹೋಗುವುದು.

ಈ ರೀತಿ ನಡೆಯುವುದನ್ನು ತಪ್ಪಿಸಬೇಕಾದರೆ, ಪ್ರಜೆಗಳು ತಮ್ಮ ಕೆಲಸಗಳನ್ನು ಜರುಗಿಸಲು ತಾವೇ ಶ್ರದ್ಧೆ ತೆಗೆದುಕೊಳ್ಳುವುದೊಂದೇ ಉಪಾಯ. ಯಾವ ಸಂದರ್ಭದಲ್ಲಿ ಅಧಿಕಾರಿವರ್ಗದ ಸಂಬಂಧವಿಲ್ಲದೆಯೇ ಕೆಲಸವನ್ನು ತಾವು ನಡೆಸಬಹುದೋ ಅಂಥಾ ಸಂದರ್ಭದಲ್ಲೆಲ್ಲ ಪ್ರಜೆಗಳು ಸರಕಾರದ ಸಹಾಯವನ್ನಪೇಕ್ಷಿಸದೆಯೇ ತಮ್ಮ ಕೆಲಸ

ಗಳನ್ನು ಸ್ವತಃ ನಡೆಸಿಕೊಳ್ಳಬೇಕು. ಎಲ್ಲಿ ಕೆಲಸದ ಜವಾಬ್ದಾರಿಯು ಸರಕಾರಕ್ಕೆ ಸೇರಿರುವುದೋ, ಅಲ್ಲಿ ಆ ಜವಾಬ್ದಾರಿಯನ್ನು ಸರಕಾರವು ಜಾಗರೂಕತೆಯಿಂದ ತೀರಿಸುವಂತೆ ನೋಡಿಕೊಳ್ಳುವುದೂ ಪ್ರಜೆಗಳ ಕರ್ತವ್ಯವೇ ಆಗಿರುತ್ತದೆ. ಪ್ರಜೆಗಳು ರಾಜ್ಯವು ತಮ್ಮದೆಂದೂ, ರಾಜ್ಯಕಾರ್ಯಗಳು ತಮ್ಮವೆಂದೂ ಭಾವಿಸಿ, ಅಧಿಕಾರಿ ಮಂಡಲವನ್ನು ಎಚ್ಚರಿಸತಕ್ಕವರೂ ತಿದ್ದತಕ್ಕವರೂ ಆಗಿರಬೇಕು. ಎದುವರೆಗೂ ಜನರು ಹಾಗಾಗುವುದಿಲ್ಲವೋ, ಎದುವರೆಗೂ ಪ್ರಜೆಗಳು ಸ್ವಪ್ರಯತ್ನ ದಿಂದಲೇ ಸ್ವಕಾರ್ಯಗಳನ್ನು ಜರುಗಿಸಿಕೊಳ್ಳಲು ಪ್ರಯತ್ನಿಸದೆ ಅಧಿಕಾರಿಗಳನ್ನೇ ನಂಬಿಕೊಂಡಿರುವರೋ, ಅದುವರೆಗೂ ಅವರು ತಮಗೆ ನ್ಯಾಯವಾಗಿ ದೊರೆಯಬಹುದಾದ ಸೌಕರ್ಯಗಳನ್ನು ಸಂಪಾದಿಸಿಕೊಳ್ಳದೆ, ಅಧಿಕಾರಿ ಮಂಡಲಕ್ಕೆ ದಾಸರಾಗಿರುವರು. ಎಲ್ಲಿ ಪ್ರಜಾಧರ್ಮವು ಲುಪ್ತವಾಗಿರುವುದೋ ಅಲ್ಲಿ ರಾಜ್ಯ ಗತಿಯು ವಕ್ರ ವಾಗುವುದು ಸ್ವಾಭಾವಿಕವೇ ಸರಿ. ಪ್ರಜೆಗಳನ್ನು ರಾಜಕೀಯ ವಿಷಯ ಗಳಲ್ಲಿ ಕೂಡಿದ ಮಟ್ಟಿಗೂ ಸ್ವತಂತ್ರರನ್ನಾಗಿಯೂ ಸ್ವಾವಲಂಬಿಗಳ ನ್ನಾಗಿಯೂ ಮಾಡುವುದರಿಂದಲೇ ಅಧಿಕಾರಿಗಳ ದಾಂಧಲೆಯು ಕಡಿಮೆ ಯಾಗಿ, ರಾಜ್ಯಕ್ಕೆ ಶಾಶ್ವತವಾದ ಶ್ರೇಯಸ್ಸುಂಟಾಗುವುದೆಂಬ ತತ್ತ್ವವು ರಂಗಾಚಾರ್ಯರ ಮನಸ್ಸಿನಲ್ಲಿ ಚೆನ್ನಾಗಿ ಬೇರೂರಿತ್ತು. ಅವರು ನೆರ ವೇರಿಸಿರುವ ಮತ್ತಾವ ಕಾರ್ಯವೂ, ಅವರು ತಿಳಿದುಕೊಂಡಿದ್ದ ಮತ್ತಾವ ರಹಸ್ಯವೂ, ಅವರು ಮಾಡಿದ ಮತ್ತಾವ ಯೋಚನೆಯೂ ಈ ತತ್ತ್ವವನ್ನು ಅವರು ಗ್ರಹಿಸಿ ಆಚರಣೆಗೆ ತಂದುದಕ್ಕೆ ಸಮಾನವಲ್ಲ. ಇತರ ವಿಷಯಗಳಲ್ಲಿ ಅವರಿಗೆ ಸಮಾನರಾದ—ಇನ್ನೂ ಬೇಕಾದರೆ, ಅವರಿ ಗಿಂತಲೂ ಗಟ್ಟಿಗರಾದ—ರಾಜ್ಯತಂತ್ರಜ್ಞರು ಇಂಡಿಯಾದೇಶದಲ್ಲಿ ಅನೇಕ ಮಂದಿ ಇದ್ದರು, ಮತ್ತು ಇರುವರು. ಆದರೆ ಈ ತತ್ತ್ವ ವನ್ನು ಕಂಡುಹಿಡಿದು, ಅದಕ್ಕೆ ತಕ್ಕ ಬೆಲೆಯನ್ನು ಕೊಟ್ಟು, ಪ್ರಜೆಗಳ ಸ್ವಾತಂತ್ರ್ಯವನ್ನೆತ್ತಿಕೊಟ್ಟ ಮಹನೀಯರು ರಂಗಾಚಾರ್ಯರೊಬ್ಬರೇ.

ಹಿಂದೆ ಅವರ ವಿಷಯದಲ್ಲಿ ಕ್ಷುದ್ರ ಮನುಷ್ಯರು ಕೆಲವರು ಸುಳ್ಳಾದ ವರ್ತಮಾನಗಳನ್ನು ಹುಟ್ಟಿಸಿದ್ದರೆಂದು ಹೇಳಿದೆವಷ್ಟೆ?

ಆ ಅಸೂಯಾಪರವಶರು—"ರಂಗಾಚಾರ್ಯರು ಮದರಾಸಿನವರಾದುದರಿಂದ ಮೈಸೂರಿನವರ ಪ್ರೀತಿಯನ್ನು ಸಂಪಾದಿಸುವುದಕ್ಕಾಗಿಯೂ, ಅರಮನೆಯ ಒಡವೆಗಳ ಕಳುವಿನ ಕಾರಣದಿಂದ ಜನರಿಗೆ ತಮ್ಮ ವಿಷಯದಲ್ಲಿ ಉಂಟಾಗಿದ್ದ ದುರಭಿಪ್ರಾಯವನ್ನು ಹೋಗಲಾಡಿಸುವುದಕ್ಕಾಗಿಯೂ, ತಮ್ಮ ಹುಳುಕುಗಳನ್ನು ಮುಚ್ಚಿ ದೊಡ್ಡ ರಾಜ್ಯತಂತ್ರಜ್ಞರೆಂದೆನ್ನಿಸಿಕೊಳ್ಳುವುದಕ್ಕಾಗಿಯೂ, ಹೀಗೆ ಬಹು ವಿಧವಾದ ಸ್ವಾರ್ಥತೆಯಿಂದ ಅವರು ಪ್ರಜಾಪಕ್ಷದವರಂತೆ ನಟಿಸುತ್ತಿದ್ದಾರೆ"—ಎಂದು ಮುಂತಾಗಿ ಆಡಿಕೊಳ್ಳಲಾರಂಭಿಸಿದರು. ಆದರೆ ಅದನ್ನು ನಂಬುವುದಕ್ಕೆ ಯಾರೂ ದೊರೆಯದೆ ಹೋದರು. ರಂಗಾಚಾರ್ಯರು ಕೃತ್ರಿಮದಿಂದ ಏನೂ ಸಂಪಾದಿಸಬೇಕಾಗಿರಲಿಲ್ಲವೆಂಬುದೂ, ಅವರ ಯೋಗ್ಯತೆಯೇ ಅವರಿಗೆ ದೊಡ್ಡ ಪದವಿಯನ್ನುಂಟುಮಾಡಿಕೊಟ್ಟಿತ್ತೆಂಬುದೂ, ಅವರು ಮೊದಲಿನಿಂದಲೂ ಪ್ರಜಾಭಿಪ್ರಾಯಕ್ಕೆ ಗೌರವವನ್ನು ಕೊಟ್ಟೇ ಇದ್ದರೆಂಬುದೂ ಎಲ್ಲರಿಗೂ ತಿಳಿದಿತ್ತು. ಅವರು ಮದರಾಸು ಸೀಮೆಯಲ್ಲಿದ್ದಾಗ (ಸುಮಾರು ೧೮೫೯) ರೆವೆನ್ಯೂ ಇಲಾಖೆಯವರು ಲಂಚ ತೆಗೆದುಕೊಳ್ಳುವ ಪದ್ಧತಿಯನ್ನು ಕುರಿತು ಒಂದು ವಹಿಯನ್ನು* ಬರೆದರೆಂದು ಹಿಂದೆಯೇ ಹೇಳಿರುವೆವು. ಆ ವಹಿಯ ಕಡೆಯಲ್ಲಿ, ಅಧಿಕಾರಿಗಳು ಲಂಚಕ್ಕೆ ಕೈಚಾಚುವುದನ್ನು ತಪ್ಪಿಸಲು ಪ್ರಜೆಗಳೇನು ಮಾಡಬೇಕೆಂಬ ಅಂಶವನ್ನು ರಂಗಾಚಾರ್ಯರು ಹೀಗೆ ತಿಳಿಸಿದ್ದರು:—

"ಪ್ರಜಾಭಿಪ್ರಾಯವು ಅಧಿಕಾರಿಗಳ ಅಕ್ರಮಗಳಿಗೆ ಅಡ್ಡವಾಗಿ ನಿಂತು, ಅವುಗಳನ್ನು ತಿದ್ದಿಕೊಳ್ಳುವುದರಲ್ಲಿ ಶ್ರದ್ಧೆತೋರಿಸುವ ಅಧಿಕಾರಿಗಳಿಗೆ ಪ್ರೋತ್ಸಾಹಕೊಡುವಷ್ಟು ಪ್ರಾಮುಖ್ಯತೆಗೆ ಬರುವವರೆಗೂ ನ್ಯೂನತೆಗಳು ಬಹುಶಃ ಪ್ರಬಲವಾಗಿಯೇ ಇರುವುವು. ಜನರಿಗೆ ಪ್ರತಿನಿಧಿಗಳೂ ಮುಖಂಡರೂ ಆಗಿದ್ದುಕೊಂಡು, ಅವರನ್ನು ಅಧಿಕಾರಿಗಳ ಅತ್ಯಾಚಾರಗಳಿಂದ ತಪ್ಪಿಸಿ, ಸಾರ್ವಜನಿಕ ವಿಷಯಗಳಲ್ಲಿ ಅವರಿಗಿರುವ ಅಭಿಪ್ರಾಯಗಳನ್ನು ಸರಕಾರಕ್ಕೆ ತಿಳುಹಿಸುವವರಾಗಿ, ಸಾಮಾಜಿಕ ವಿಷಯಗಳಲ್ಲಿ ತಕ್ಕಂತೆ ತಿದ್ದುಪಾಟು ನಡೆಯಿಸಲು ತಕ್ಕಷ್ಟು ಪ್ರಾಶಸ್ತ್ಯವುಳ್ಳವರೂ, ಮಾನ್ಯರೂ, ನಡತೆವಂತರೂ ಆಗಿರುವ ದೇಶೀಯರು ಸೇರಿ ರಾಜಧಾನಿಯಲ್ಲಿಯೂ ಇತರ ಸ್ಥಳಗಳಲ್ಲಿಯೂ ಸಭೆಗಳನ್ನೇರ್ಪಡಿಸಿಕೊಳ್ಳುವುದು

* ಪುಟ ೩೯—೪೦.

ಪ್ರಜಾಭಿಪ್ರಾಯವನ್ನು ಪ್ರಾಮುಖ್ಯಕ್ಕೆ ತರಲು ಒಂದು ಪ್ರಧಾನ ಮಾರ್ಗ............ ವಿದ್ವಾಂಸರಾದ ದೇಶೀಯರಿಂದ ಇಂಗ್ಲಿಷ್ ಮತ್ತು ದೇಶೀಯ ಭಾಷೆಗಳಲ್ಲಿ ಪ್ರಕಟಿಸಲ್ಪಡುವ ಒಂದು ದೇಶೀಯ ವರ್ತಮಾನಪತ್ರಿಕೆಯು ಅಂಥಾ ಸಭೆಗಳಿಗೆ ಅತಿ ಬಲವಾದ ಸಹಕಾರಿಯಾಗುವುದು.''

ಈ ರೀತಿ ಮೊದಲಿನಿಂದಲೂ ಅಭಿಪ್ರಾಯಪಟ್ಟಿದ್ದವರ ವಿಷಯದಲ್ಲಿ, ಅವರು ಸ್ವಾರ್ಥತೆಯಿಂದ ಪ್ರಜಾಪಕ್ಷದ ವೇಷವನ್ನು ತಾಳಿದರೆಂದು ಹೇಳುವುದಕ್ಕೆ ಅಜ್ಞಾನ ಮಾತ್ಸರ್ಯಗಳ ಹೊರತು ಬೇರೊಂದು ಕಾರಣವಿರದು. ಅವರು ಮೊದಲಿನಿಂದಲೂ ಯಾವ ಪ್ರಯೋಜನಾಪೇಕ್ಷೆಯೂ ಇಲ್ಲದೆ ಪುಸ್ತಕಗಳನ್ನು ಬರೆದು, ಆ ಮೂಲಕ ಪ್ರಜೆಗಳ ಕಷ್ಟಗಳನ್ನೂ ಅಧಿಕಾರಿಗಳ ದುಶ್ಶೀಲವನ್ನೂ ಬಯಲಿಗೆ ಹಾಕುತ್ತಿದ್ದುದೇ ಅವರ ಪ್ರಜಾಭಿಮಾನಕ್ಕೆ ನಿದರ್ಶನವಾಗಿದೆ. ''ಮೈಸೂರಿನ ಬ್ರಿಟಿಷರ ಆಳಿಕೆ'' ಯನ್ನು ಕುರಿತ ಲೇಖನದಲ್ಲಿಯೂ ಅವರು ಪ್ರಜಾಭಿಪ್ರಾಯದ ಆವಶ್ಯಕತೆಯನ್ನು ಪದೇ ಪದೇ ಸೂಚಿಸಿದ್ದರು.

ಅನೇಕ ಮಂದಿ ಐರೋಪ್ಯ ರಾಜ್ಯತಂತ್ರವಿಶಾರದರೂ, ಪ್ರಜಾಪ್ರಮುಖರೂ, ಮೈಸೂರಿನ ಪ್ರಜಾಪ್ರತಿನಿಧಿ ಸಭೆಯ ವಿಷಯದಲ್ಲಿ ಬಹುವಾಗಿ ಹರ್ಷಿಸಿ, ರಂಗಾಚಾರ್ಯರ ಪ್ರತಿಭೆಯನ್ನು ಬಹಳವಾಗಿ ಕೊಂಡಾಡಿರುವರು. ೧೮೯೨ನೆಯ ನವಂಬರಿನಲ್ಲಿ ಲಾರ್ಡ್ ಲ್ಯಾನ್ಸ್‌ಡೌನ್ ಎಂಬ ವೈಸರಾಯಿಯವರು ಮೈಸೂರಿಗೆ ಬಂದಿದ್ದಾಗ, ಆ ಸಭೆಯನ್ನು ನೋಡಿ ತಮಗುಂಟಾದ ಸಂತೋಷವನ್ನು ಸೂಚಿಸಿ, ಸಭಿಕರನ್ನು ಪ್ರೋತ್ಸಾಹಗೊಳಿಸಿದರು. ೧೯೦೯ರಲ್ಲಿ ಇಲ್ಲಿಗೆ ಬಂದಿದ್ದ ಬ್ರಿಟಿಷ್ ಪಾರ್ಲಿಮೆಂಟಿನ ಸಭಿಕರಾದ ಕೀರ್ ಹಾರ್ಡಿ ಎಂಬುವರು ಅದನ್ನು ಜರ್ಮನೀ ದೇಶದ ''ರಿಇಚ್ ಸ್ಟ್ಯಾಗ್'' ಎಂಬ ಪ್ರಜಾಪ್ರತಿನಿಧಿ ಸಭೆಗೆ ಹೋಲಿಸಿ, ಅದನ್ನು ಸ್ಥಾಪಿಸಿದವರನ್ನು ಹೊಗಳಿದರು.*

* ೧೯೧೭ನೆಯ ಇಸವಿಯಲ್ಲಿ ಈಗಿನ ಶ್ರೀಮನ್ಮಹಾರಾಜ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರರವರು, ದಿವಾನ್ ಸರ್ ಎಂ. ವಿಶ್ವೇಶ್ವರಯ್ಯನವರ ಮೂಲಕ ಪ್ರತಿನಿಧಿಗಳು ಮಾಡಿದ್ದ ಬಿನ್ನಹವನ್ನಂಗೀಕರಿಸಿ, ಪ್ರಜಾಪ್ರತಿನಿಧಿ ಸಭೆಯು ಅಲ್ಲಿಂದ ಮುಂದೆ ವರ್ಷಕ್ಕೆ ಎರಡಾವರ್ತಿ ಸೇರತಕ್ಕುದೆಂದು ಅಪ್ಪಣೆಕೊಡಿಸಿದರು. ಅದರಲ್ಲಿ ಚರ್ಚೆಯಾಗ

ಈ ಪುಸ್ತಕದ ಪ್ರಥಮ ಮುದ್ರಣದಲ್ಲಿ, ಗ್ರಂಥಲೇಖನಾರಂಭ ವಾದಂದಿನಿಂದ ಈ ೭ನೆಯ ಪರಿಚ್ಛೇದವನ್ನು ಬರೆದು ಮುಗಿಸುವಷ್ಟ ರೊಳಗಾಗಿ ನಡೆದಿದ್ದ ಕೆಲವು ಚರಿತ್ರಾರ್ಹವಾದ ಸಂಗತಿಗಳು ಈ ಬಳಿ ಉದಾಹರಿಸಲ್ಪಟ್ಟಿದ್ದುವು. ಅವು ಯಾವುವೆಂದರೆ:—

ಚೀನಾದಲ್ಲಿ ಆಗಿದ್ದ ಪ್ರಜಾಪ್ರತಿನಿಧಿ ಸಭಾ ಸಂಸ್ಥಾಪನೆ.

ಪೋರ್ಚುಗಲ್‌ನಲ್ಲಿ ಪ್ರಜೆಗಳಿಂದ ಸ್ವಾತಂತ್ರ್ಯಸಾಧನೆಗಾಗಿ ನಡೆದಿದ್ದ ರಾಜ್ಯವಿಪ್ಲವ.

ತುರ್ಕಿಸ್ಥಾನ, ಪರ್ಸಿಯಾ ಮೊದಲಾದ ಪ್ರಾಚ್ಯದೇಶಗಳ ಜನರಲ್ಲಿಯೂ ಬೆಳೆಯುತ್ತಿದ್ದ ರಾಜಕೀಯ ಸ್ವಾತಂತ್ರ್ಯಾಪೇಕ್ಷೆ.

ಬ್ರಿಟಿಷ್ ಇಂಡಿಯಾದಲ್ಲಿ ಪ್ರಜೆಗಳ ಸ್ವರಾಜ್ಯಾಕಾಂಕ್ಷೆ; ತದನು ಸಾರವಾಗಿ ಮಾರ್ಲೇ-ಮಿಂಟೋ ಪ್ರಭುಗಳು ಮಾಡಿದ ರಾಜ ಕೀಯ ಸಂಸ್ಕರಣ.

ಕಳೆದ ೧೦ ವರ್ಷಗಳಲ್ಲಿ ಈ ಬಗೆಯ ಸಂಗತಿಗಳು ಇನ್ನೂ ಅನೇಕ ನಡೆದು ಪ್ರಜಾಸ್ವಾಮ್ಯದ ಭಾವನೆಗಳು ಪ್ರಪಂಚದಲ್ಲಿ ಬಲಿತಿವೆ. ತತ್ರಾಪಿ ಕ್ರಿ. ಶ. ೧೯೧೯ರಲ್ಲಿ ಮುಗಿದ ಐರೋಪ್ಯ ಮಹಾಯುದ್ಧದ ಮೂಲಕ ಆಸ್ಟ್ರಿಯಾ, ಜರ್ಮನಿ, ರಷ್ಯಾ ಮುಂತಾದ ಪ್ರಬಲ ರಾಜ್ಯಗಳಲ್ಲಿಯೂ ಸಹ ರಾಜರು ಸಿಂಹಾಸನಚ್ಯುತರಾಗಿ, ಪ್ರಜೆಗಳೇ ಆಧಿಪತ್ಯವನ್ನು ವಹಿಸುವಂತಾಯಿತು. ಯುದ್ಧದಿಂದ ಅಪಾಯ ಹೊಂದದೆ ಮತ್ತಷ್ಟು ಮಹೋನ್ನತವಾಗಿರುವ ಸಿಂಹಾಸನವು ಯೂರೋಪು ಖಂಡದಲ್ಲೆಲ್ಲಾ ಇಂಗ್ಲೆಂಡ್ ಒಂದರದೇ. ಅದಕ್ಕೆ ಅಲ್ಲಿಯ ರಾಜರು, ಇತರ ರಾಜರಂತೆ ಉಚ್ಛೃಂಖಲರಾಗಿರದೆ, ಪ್ರಜಾಭಿಪ್ರಾಯಕ್ಕೆ ಅನುಸಾರವಾಗಿ ನಡೆಯು ತ್ತಿರುವುದೇ ಕಾರಣವೆಂದು ರಾಜಧರ್ಮವಿದರೆಲ್ಲರೂ ಘೋಷಿಸುತ್ತಿರು ವರು. ಈ ರೀತಿಯಾಗಿ ಈಗ ನಾಗರಿಕತೆಗೆ ಬಂದಿರುವ ಭೂಭಾಗಗಳ

---

ತಕ್ಕ ವಿಷಯಗಳ ಸಂಖ್ಯೆಯೂ ಅದರ ಇತರ ಅಧಿಕಾರಗಳೂ ಸಹ ಆಗ ಹೆಚ್ಚಾದುವು. ೧೯೩೭ನೆಯ ಇಸವಿಯಲ್ಲಿ ಆದ ರಾಜ್ಯಸಂಸ್ಥಾ ಪರಿಷ್ಕಾರದಿಂದ ಪ್ರತಿನಿಧಿ ಸಭೆಯು ರಾಜ್ಯಶಾಸನದ ಆಧಾರವನ್ನೂ ಪಡೆಯಿತಲ್ಲದೆ ಇನ್ನೂ ಅನೇಕ ಹೊಸ ಅಧಿಕಾರಗಳಲ್ಲಿ ಭಾಗಿಯಾಯಿತು.

ಲ್ಲೆಲ್ಲಾ ಪ್ರಜಾರಾಜ್ಯವೇ ಸ್ಥಿರವಾಗುತ್ತಿದೆ. ಬ್ರಿಟಿಷ್ ಇಂಡಿಯದಲ್ಲಿ ಮಾಂಟೆಗು ಮಂತ್ರಿಗಳ ಸಹಾಯದಿಂದ ಪ್ರಜಾಸಮ್ಮತ ಪ್ರಭುತ್ವದ ಏರ್ಪಾಟುಗಳು ನಡೆದು, ಇಷ್ಟರಲ್ಲಿಯೇ ಪುನಃ ಅವು ಪರಿಷ್ಕಾರ ಹೊಂದಿ ಮತ್ತಷ್ಟು ಪ್ರಜಾನುಕೂಲವಾಗುವಂತೆ ತೋರುತ್ತಿದೆ. ಇದೆಲ್ಲ ವನ್ನೂ ವಿಚಾರಿಸಿ ನೋಡಿದರೆ ತೋರಿಬರುವ ನೀತಿಯು ನಮ್ಮ ವ್ಯಾಸ ಕಾಳಿದಾಸಾದಿಗಳು ಹೇಳಿದ "ರಾಜಾ ಪ್ರಕೃತಿ ರಂಜನಾತ್" ಎಂಬ ವಾಕ್ಯದ ಅನುವಾದದಂತೆ ಕಾಣುತ್ತದೆ.

ರಾಜ್ಯವೆಂಬುದರಲ್ಲಿ ರಾಜನೆಂದೂ ಪ್ರಜೆಯೆಂದೂ ಎರಡು ಮುಖ್ಯ ಭಾಗಗಳುಂಟಲ್ಲವೆ? ಈ ಎರಡು ಭಾಗಗಳೂ ಅನ್ಯೋನ್ಯ ವಿಶ್ವಾಸ ಗೌರವಗಳಿಂದ ಕೂಡಿರಬೇಕು. ಹಾಗಿಲ್ಲದೆ ರಾಜನು ತನ್ನ ಅಧಿಕಾರ ವನ್ನು ಪ್ರಜಾಪರಿಪಾಲನೆಗೋಸ್ಕರ ತನ್ನ ಕೈಕೆಳಗಿರುವ ಕಾರುಬಾರಿ ಗಳಿಗೊಪ್ಪಿಸಿದಾಗ, ಅವರು ಕರ್ತವ್ಯವನ್ನು ತೊರೆದು, ಸ್ವಾರ್ಥಪರ ರಾಗಿ, ಅನ್ಯಾಯದಿಂದ ನಡೆದರೆ, ರಾಜ ಪ್ರಜೆಗಳಿಗೆ ಸೌಮನಸ್ಯವು ಮುರಿದುಹೋಗಿ, ಪರಸ್ಪರ ವಿರೋಧಗಳು ಹುಟ್ಟಿಯೇ ಹುಟ್ಟು ವುವು; ಅದರಿಂದ ಇಬ್ಬರಿಗೂ ಕಷ್ಟನಷ್ಟಗಳು ಸಂಭವಿಸಲೇ ಬೇಕು. ಇಂತಹ ಘಟನೆಯನ್ನು ನಿವಾರಣೆ ಮಾಡಲು ಪ್ರಜೆಗಳಿಗೆ ರಾಜ್ಯದ ಕಾರು ಬಾರಿಗಳ ವಿಷಯದಲ್ಲಿ ನಿಗ್ರಹಾನುಗ್ರಹಗಳ ಅಧಿಕಾರವನ್ನು ಕೊಡುವು ದೊಂದೇ ಉಪಾಯ. ರಾಜ್ಯದ ಮಂತ್ರಿ ಮಂಡಲವು,—ಎಂದರೆ ಸರ ಕಾರದ ಕಾರುಬಾರಿಗಳು,-ಪ್ರಜಾಪ್ರತಿನಿಧಿಗಳ ಪ್ರೇರಣೆ ವಿಚಾರಣೆಗಳಿಗೆ ಒಳಪಟ್ಟವರಾಗಿ, ತಮ್ಮ ಕೃತ್ಯಾಕೃತ್ಯಗಳ ವಿಷಯಗಳಲ್ಲಿ ಅವರಿಗೆ ಜವಾಬು ಹೇಳಿ ಸಮಾಧಾನ ಕೊಡತಕ್ಕವರಾಗಿ ಇರಬೇಕು. ಈ ವ್ಯವ ಸ್ಥೆಯೇ ಉತ್ತರಭಾರವಾಹೀ (ಜವಾಬ್ದಾರೀ) ಸರಕಾರ, ಅಥವಾ ಉತ್ತರ ಬದ್ಧ ಸಾಚಿವ್ಯ (Responsible Government) ವೆನ್ನಿಸುವುದು. ಈ ವ್ಯವಸ್ಥೆಯಲ್ಲಿ ಪ್ರಜೆಗಳು (ಅಥವಾ ಅವರ ಪಕ್ಷದವರು) ಅಧಿಕಾರಿಗಳ ಅಧರ್ಮಗಳಿಗೆ ತಡೆಯಾಗಿ, ತಮ್ಮ ಸುಖ ಸೌಕರ್ಯಗಳನ್ನು ಕಾಪಾಡಿ ಕೊಂಡು, ರಾಜ್ಯಕ್ಕೆ ಒತ್ತಾಸೆಯಾಗಿರುವರು. ಇದಕ್ಕೆ ಇಂಗ್ಲೆಂಡ್ ದೇಶವೇ ದೃಷ್ಟಾಂತವಾಗಿದೆ. ಅಲ್ಲಿನಂತಹ ಉತ್ತರಭಾರವುಳ್ಳ ಸಾಂಕುಶ

ಸರಕಾರ ಕ್ರಮವನ್ನೇ ಇಲ್ಲಿಯೂ ಪ್ರಚಾರಕ್ಕೆ ತರಬೇಕೆಂದು ನಮ್ಮ ಕಾಲದಲ್ಲಿ ಭಾರತೀಯ ದೇಶಾಭಿಮಾನಿಗಳು ಪ್ರಯತ್ನಿಸುತ್ತಲಿರುವರು. ಈ ಪ್ರಯತ್ನಕ್ಕೆ ಮೈಸೂರಿನ ರಂಗಾಚಾರ್ಯರು ಮೂಲಪುರುಷರಂತೆ ಇರುವರು.

---

## ಪರಿಚ್ಛೇದ ೭

## ಅಧಿಕಾರ ಲಕ್ಷಣಗಳು

"ಸನ್ಮಂತ್ರಿಣಾ ವರ್ಧಯತೇ ನೃಪಾಣಾಂ ಲಕ್ಷ್ಮೀರ್ಮಹೀ ಧರ್ಮ ಯಶಃ ಸಮೂಹಃ"

ಇಷ್ಟು ಹೇಳಿದಮೇಲೆ, ರಂಗಾಚಾರ್ಯರು ತಮ್ಮ ಗುರುತರಗಳಾದ ಕರ್ತವ್ಯಗಳನ್ನು ನೆರವೇರಿಸುವುದರಲ್ಲಿ ನಿಃಸ್ಪೃಹರಾಗಿಯೂ ವಿವೇಚನೆಯುಳ್ಳವರಾಗಿಯೂ ಇದ್ದರೆಂದು ಹೇಳಬೇಕಾದುದೇ ಇಲ್ಲ. ರಾಜ್ಯ ಯಂತ್ರದ ಎಲ್ಲಾ ಭಾಗಗಳಲ್ಲಿಯೂ ಅವರ ಕೈಗುರುತು ಈಗಲೂ ಕಂಡುಬರುವುದು. ಅವರು ಬೇರೆ ಬೇರೆ ಇಲಾಖೆಗಳಲ್ಲಿ ಕಂಡುಬಂದ ನ್ಯೂನತೆಗಳನ್ನು ಸರಿಪಡಿಸಿ, ಅನಾವಶ್ಯಕವಾದ ಅಧಿಕಾರಸ್ಥಾನಗಳನ್ನು ತೆಗೆದುಹಾಕಿ, ಬೇಕಾದ ಸಿಬ್ಬಂದಿಗಳನ್ನು ಹೊಸದಾಗಿ ಸೇರಿಸಿ, ಅವರ ಸಂಬಳಗಳನ್ನು ಯೋಗ್ಯವಾದಂತೆ ಹೆಚ್ಚಿಸಿ, ಕಾರ್ಯಕ್ರಮಗಳನ್ನು ತಿದ್ದಿ, ಎರಡೇ ವರ್ಷಗಳೊಳಗಾಗಿ ರಾಜ್ಯ ರಥದ ಮಾರ್ಗವನ್ನು ಸುಗಮವನ್ನಾಗಿ ಮಾಡಿದರು. ಅವರ ವಿಚಕ್ಷಣೆಯೆಂತಹುದೆಂಬುದನ್ನು ರಾಜ್ಯದ ಆದಾಯ ವ್ಯಯಗಳ ರೀತಿಯನ್ನು ನೋಡಿ ಊಹಿಸಬಹುದು :—

| | ದಿವಾನರಾಗುವುದಕ್ಕೆ ಮುಂಚೆ | ದಿವಾನರಾದಮೇಲೆ | |
|---|---|---|---|
| | | ಮೊದಲನೆಯ ವರ್ಷ | ಎರಡನೆಯ ವರ್ಷ |
| | (೧೮೭೪-೭೫ರಲ್ಲಿ) | (೧೮೮೦-೮೧ರಲ್ಲಿ) | (೧೮೮೧-೮೨ರಲ್ಲಿ) |
| ಆದಾಯ ರೂ. | ೧,೦೯,೫೦,೦೦೦ | ೧,೦೧,೦೦,೦೦೦ | ೧,೦೮,೫೦,೯೯೧ |
| ವ್ಯಯ ,, | ೧,೦೯,೫೦,೭೬೦ | ೧,೦೦,೯೬,೨೮೧ | ೧,೧೯,೩೩,೧೫೭ |

೧೮೭೪-೭೫ನೆಯ ಸಾಲು ಧಾತು-ಈಶ್ವರ ಸಂವತ್ಸರಗಳ ಮಹಾಕ್ಷಾಮಕ್ಕೆ ಹಿಂದಿನದು. ಆಗ ಹೆಚ್ಚಾಗಿದ್ದ ಆದಾಯ ವ್ಯಯಗಳು

ಕ್ಷಾಮದ ದೆಸೆಯಿಂದ ತಗ್ಗಿದ್ದು, ರಂಗಾಚಾರ್ಯರ ದಿವಾನ್‌ಗಿರಿಯ ಎರಡನೆಯ ವರ್ಷದಲ್ಲಿಯೇ ಪುನಃ ಚೇತರಿಸಿಕೊಂಡು ಬೆಳೆಯಲಾರಂಭಿಸಿದುವು. ಅವರ ಏರ್ಪಾಟುಗಳ ವಿಷಯದಲ್ಲಿ ಒಂದು ಉಪಮಾನವನ್ನು ಕೊಡಬಹುದು. ಗಟ್ಟಿಗನಾದ ಶಿಲ್ಪಿಯು (ಇಂಜನೀರು) ಮನೆಯ ನಕ್ಷೆಯನ್ನು (ಪ್ಲಾನ್) ತಯಾರುಮಾಡಿ, ಕಟ್ಟಡ ಕಟ್ಟುವ ವಠಾರವನ್ನು ಆಳವಾಗಿ ಅಗಿಸಿ, ಭೂಶುದ್ಧಿ ಮಾಡಿಸಿ, ಭದ್ರವಾದ ಹಸ್ತಿಭಾರವನ್ನಿರಿಸಿ, ಬಲವಾದ ಕಲ್ಲುಗೋಡೆಗಳನ್ನೆಬ್ಬಿಸಿ, ಗಾರೆ ಗಚ್ಚು ಮಾಡಿಸಿ, ಅನುಕೂಲವಾದ ಚಾವಣಿಯನ್ನು ಹಾಕಿಸಿ, ಮಳೆ ಗಾಳಿ ಬಂಕಿಗಳ ಅಪಾಯವಿಲ್ಲದಂತೆ ಬಹುಕಾಲ ಬಾಳುವ ಮನೆಯನ್ನು ನಿರ್ಮಿಸುವನು. ಅದರಲ್ಲಿ ವಾಸಮಾಡುವವರು ಮಾಡಲು ಉಳಿದಿರುವುದೇನು? ಗೋಡೆ ಒಂದುವೇಳೆ ಬಿರಕು ಬಿಟ್ಟರೆ ಅದಕ್ಕೆ ಗಾರೆಹಾಕಿಸಿ, ಮೇಲೆ ಹೆಂಚು ಒಡೆದರೆ ಅದಕ್ಕೆ ಬೇರೊಂದನ್ನು ಬದಲಾಗಿಟ್ಟು, ಬೇಕಾದರೆ ದೊಡ್ಡ ಕೊಟ್ಟಡಿಯೊಳಗೆ ಒಂದು ಪರದೆಯನ್ನು ಹಾಕಿ ಚಿಕ್ಕದು ಮಾಡಿಕೊಂಡು, ಅಥವಾ ಉಗ್ರಾಣದ ಮನೆಯನ್ನು ಊಟದ ಕೋಣೆಯಾಗಿ ಮಾಡಿಕೊಂಡು, ಇನ್ನೂ ಬೇಕಾದರೆ ಒಂದು ಒಪ್ಪಾರವನ್ನೋ ಚಪ್ಪರವನ್ನೋ ಹಾಕಿಕೊಂಡು—ಈ ಬಗೆಯ ಚಿಲ್ಲರೆ ಕಾಂಗಾರಿಯನ್ನು ಅವರು ಮಾಡಿಸುತ್ತಿದ್ದರೆ ಸಾಕು; ಅವರು ಗೋಡೆಗಳನ್ನೆಲ್ಲ ತಳ್ಳಿಸಿ, ಹೊಸದಾಗಿ ಹಸ್ತಿಭಾರ ಹಾಕಬೇಕಾದ ಸಂದರ್ಭವೇನೂ ಬೀಳುವುದಿಲ್ಲ. ಅದೇ ಪ್ರಕಾರವಾಗಿ, ರಂಗಾಚಾರ್ಯರು ರಾಜ್ಯಸಂಸ್ಥೆಗೆ ಸ್ಥಿರವಾದ ತಳಹದಿ ಹಾಕಿ, ಬಲವಾದ ಕಟ್ಟಡವನ್ನು ಕಟ್ಟಿ, ತಮ್ಮ ಅನಂತರ ಬರುವವರ ಬುದ್ಧಿವಂತಿಕೆಯೇನಿದ್ದರೂ ಮೇಲ್ಗಡೆ ಸಮಯೋಚಿತವಾದ ಬದಲಾವಣೆಗಳನ್ನು ಮಾಡಿಕೊಳ್ಳುವುದಕ್ಕೆ ಮಾತ್ರವೇ ಆವಶ್ಯಕವಾಗುವಂತೆ ಮಾಡಿಟ್ಟಿರುವರು.

ಅವರಲ್ಲಿ ದೂರಾಲೋಚನೆಯ ಜೊತೆಗೆ ಉದ್ಯೋಗಶೀಲತೆಯೂ ಸೇರಿತ್ತು. ಹಗಲೆನ್ನದೆ, ಇರುಳೆನ್ನದೆ, ಬೇಸರವಿಲ್ಲದೆ, ವಿಶ್ರಾಂತಿಯಿಲ್ಲದೆ, ರಾಜ್ಯ ಕಾರ್ಯವೇ ಸ್ವಕಾರ್ಯವೆಂದು ಅವರು ಸರ್ವಾತ್ಮನಾ ಭಾವಿಸಿದ್ದರು. ರಾಜ್ಯ ಹಿತಚಿಂತನೆಯು ಅವರಿಗೆ ಕಛೇರಿಯಲ್ಲಿದ್ದ ಕಾಲದಲ್ಲಿ,

ಅಥವಾ ಉಪನ್ಯಾಸಕೊಡುವ ಕಾಲದಲ್ಲಿ ಮಾತ್ರವೇ ಬರುತ್ತಿರಲಿಲ್ಲ. ಅದು ಅವರನ್ನು ಬಿಟ್ಟಿದ್ದ ಘಳಿಗೆಯೇ ಇರಲಿಲ್ಲ. ಅವರು ದಿವಾನರಾಗಿದ್ದ ಎರಡು ವರ್ಷವೂ ಬೇಸಗೆಯಲ್ಲಿ ಶ್ರೀ ಚಾಮರಾಜೇಂದ್ರ ಒಡೆಯರವರು ನೀಲಗಿರಿಯಲ್ಲಿ ಪ್ರವಾಸಮಾಡಿದರು. ಅವರು ಅಲ್ಲಿಯ ರಮಣೀಯ ವಾದ ನೋಟಗಳನ್ನೂ ಹಿತಕರವಾದ ವಾಯುಗುಣವನ್ನೂ ವರ್ಣಿಸಿ, ಅವುಗಳನ್ನನುಭವಿಸಲು ಬರಬೇಕೆಂದು ತಮ್ಮ ದಿವಾನರಿಗೆ ಎಷ್ಟೋ ಪ್ರೀತಿಯಿಂದ ಪುನಃಪುನಃ ಕಾಗದ ಬರೆದರು. ಆದರೂ ರಂಗಾ ಚಾರ್ಯರು ತಮ್ಮ ಕಾರ್ಯಗೌರವವನ್ನು ಮನಸ್ಸಿನಲ್ಲಿಟ್ಟುಕೊಂಡು, ನೀಲಗಿರಿಯ ಸೌಖ್ಯವು ತಮಗಲ್ಲವೆಂದಿದ್ದರು. ಅವರು ಆಲಸ್ಯಹೊಂದಿ ದಾಗ ವಿಶ್ರಾಂತಿಪಡೆಯಬೇಕೆಂದು ಮಹಾರಾಜರವರೇ ಎಷ್ಟೋಸಲ ಬಲಾತ್ಕರಿಸಿದರೂ ಅವರು ಕೆಲಸವನ್ನು ಬಿಟ್ಟಿರುತ್ತಿರಲಿಲ್ಲ. ಇದಕ್ಕಾಗಿ ಮಹಾರಾಜರವರು ತಮ್ಮ ಕಾಗದಗಳಲ್ಲಿ ಕೋಪವನ್ನಭಿನಯಿಸು ತ್ತಿದ್ದರು. ಅದಕ್ಕೆ ಪ್ರತ್ಯುತ್ತರವಾಗಿ ರಂಗಾಚಾರ್ಯರು ಬರೆದ ಕಾಗದದಲ್ಲಿ ಯಾವುದಾದರೊಂದು ರಾಜ್ಯಕಾರ್ಯವನ್ನು ಹೊಸದಾಗಿ ನಿರೂಪಿಸುತ್ತಿದ್ದರು. ರಾಜ ಮಂತ್ರಿಗಳ ಈ ಪತ್ರಿಕಾ ಪ್ರಸಂಗವು ವಾಚಕರಿಗೆ ಸಂತೋಷಪ್ರದವಾಗಿಯೂ ಇಬ್ಬರ ವಿಷಯದಲ್ಲಿಯೂ ಗೌರವವನ್ನು ಹೆಚ್ಚಿಸತಕ್ಕುದಾಗಿಯೂ ಇದೆ.

ಒಂದಾನೊಂದು ಕಾಗದದಲ್ಲಿ ಶ್ರೀಮನ್ಮಹಾರಾಜರವರು, ತಮಗೆ ರಂಗಾಚಾರ್ಯರ ಸಮೀಪ ಬಂಧುವಾದ ಒಬ್ಬ ಅಧಿಕಾರಸ್ಥನು ತನಗೆ 'ಬಡ್ತಿ' ದೊರೆಯಲಿಲ್ಲವೆಂದು ಬರೆದುಕೊಂಡಿದ್ದ ಅರ್ಜಿಯನ್ನು ಗರ್ಭೀ ಕರಿಸಿ, ಆ ಅರ್ಜಿದಾರನು ದಿವಾನರ ಸಂಬಂಧಿಯಾಗಿದ್ದುದು ಆತನ ದುರದೃಷ್ಟವೆಂದು ಬರೆದಿದ್ದರು. ಅದರ ರಹಸ್ಯವೇನಂದರೆ—ಆ ಅರ್ಜೀ ದಾರನ ಚಾಲು ಒಳ್ಳೆಯದಾಗಿರಲಿಲ್ಲ; ಅಪರಿಶುದ್ಧವಾದ ನಡತೆಯುಳ್ಳ ವನು ಬಂಧುವಾಗಲಿ, ಯಾರಾದರಾಗಲಿ ಅವನಿಗೆ ವಿಶ್ವಾಸತೋರಿಸು ವುದು ರಂಗಾಚಾರ್ಯರ ಸ್ವಭಾವದಲ್ಲಿರಲಿಲ್ಲ.

ಲಂಚವೇ ಮೊದಲಾದ ಸರಕಾರಿ ನೌಕರರ ತಪ್ಪುಗಳ ವಿಷಯದಲ್ಲಿ ರಂಗಾಚಾರ್ಯರಿಗೆ ಮೊದಲಿನಿಂದಲೂ ಆಗ್ರಹವಿತ್ತೆಂಬ ಅಂಶವನ್ನು

ಮೇಲೆಯೇ ಸ್ಪಷ್ಟಪಡಿಸಿರುವೆವು. ಹಿಂದೆ ಅವರು ಮದರಾಸು ಪ್ರಾಂತ ದಲ್ಲಿ ಒಬ್ಬ ಕಲೆಕ್ಟರರ ಬಳಿ ಶಿರಸ್ತೆದಾರ್ ಕೆಲಸದಲ್ಲಿದ್ದಾಗ ಒಂದಾವರ್ತಿ ಜಮಾಬಂದಿಗಾಗಿ ಹೋಗಿದ್ದರು. ಒಂದಾನೊಂದೂರಿನ ತಹಶೀಲು ದಾರನು, ಶಿರಸ್ತೆದಾರರಿಂದ ತನ್ನಮೇಲೆ ಯಾವ ತಪ್ಪು ಹೊರಿಸಲ್ಪಟ್ಟು ತನಗೇನು ಕೇಡಾಗುವುದೋ ಎಂಬ ಭಯದಿಂದ, ಶಿರಸ್ತೆದಾರರನ್ನು ಮೆಚ್ಚಿಸಲು ಹಿಂದಿನ ಮಾಮೂಲು ಮೇರೆಗೆ 'ನಜರು' ತೆಗೆದುಕೊಂಡು ಬಂದನು. ರಂಗಾಚಾರ್ಯರು ಅದನ್ನು ಕಂಡೊಡನೆಯೆ ಆಗ್ರಹ ಗೊಂಡು, ಆತನನ್ನು ಬೈದು ಕಳುಹಿಸಿದರು. ಆತನು ಮತ್ತಷ್ಟು ಭಯ ಭ್ರಾಂತನಾಗಿ ತನ್ನಿಂದ ಏನು ತಪ್ಪು ನಡೆಯಿತೋ ಎಂದು ಚಿಂತೆಪಡು ತ್ತಿರುವಲ್ಲಿ, ಅವನ ಸ್ನೇಹಿತರು ಬಂದು, ಆ ಶಿರಸ್ತೆದಾರರು ಬಹಳ ಗಟ್ಟಿಗರೆಂದೂ, ಅವನು ಕೊಟ್ಟ ಲಂಚವು ಅವರ ಯೋಗ್ಯತೆಗೆ ಸಾಲ ದೆಂದೂ, ಅದರಿಂದ ಅವರು ಅಸಮಾಧಾನಪಟ್ಟಿರಬಹುದೆಂದೂ ಹೇಳಿ ದರು. ತಹಸೀಲ್ದಾರನು ಈ ದುರ್ಬೋಧನೆಗೆ ಕಿವಿಗೊಟ್ಟು, ಹಿಂದೆ ತಾನು ತೆಗೆದುಕೊಂಡುಹೋಗಿದ್ದುದರ ಎರಡರಷ್ಟು ಕಾಣಿಕೆಯನ್ನು ಗಂಟುಕಟ್ಟಿ ತೆಗೆದುಕೊಂಡು ಹೋಗಿ, ರಂಗಾಚಾರ್ಯರಿಗೆ ತಿಳಿಯದಂತೆ ಅವರ ಹಾಸಿಗೆಯ ತಲೆದಿಂಬಿನ ಕೆಳಗೆ ಇರಿಸಿದನು. ಮಾರನೆಯ ದಿನ ರಂಗಾಚಾರ್ಯರು ಎದ್ದು ಹಾಸಿಗೆಯನ್ನು ಸುತ್ತುತ್ತಲೆ ರೂಪಾಯಿ ಗಳು ಚೆಲ್ಲಾಡುತ್ತಿದ್ದುವು. ಅದನ್ನವರು ಕಂಡು ಆ ತಹಸೀಲ್ದಾರನನ್ನು ಕರೆಯಿಸಿ, ಪುನಃ ಅವನನ್ನು ಛೀಗುಟ್ಟಿ, ಅವನಿಗೆ ಬುದ್ಧಿಹೇಳಿ, ಅಭಯ ವನ್ನು ಕೊಟ್ಟು, ಅವನ ಹೆಸರನ್ನು ಮೇಲಿನ ಅಧಿಕಾರಿಗೆ ತಿಳಿಸದೆ, ಲಂಚವು ಆ ಪ್ರಾಂತದಲ್ಲಿ ಪ್ರಬಲವಾಗಿದೆಯೆಂದು ಮಾತ್ರ ವರದಿ ಬರೆದರು.

ಅವರು ದಿವಾನರಾಗಿದ್ದಾಗ ಅಮಲ್ದಾರ ಮೊದಲಾದ ಯಾವ ಅಧಿಕಾರಿಯೇ ಆಗಲಿ ಕೆಟ್ಟ ನಡತೆಯುಳ್ಳವನೆಂಬ ಸಂಗತಿಯು ಅವರ ಕಿವಿಗೆ ಬಿದ್ದರೆ, ಒಡನೆಯೇ—ಆಗ ಅರ್ಧರಾತ್ರಿಯಾಗಿರಲಿ—ಅವನಿಗೆ ಹೇಳಿ ಕಳುಹಿಸಿ, ಹೇಗಿದ್ದರೆ ಹಾಗೆಯೇ ಕರೆತರಿಸಿ, ಬಾಯಿಗೆ ಬಂದಂತೆ ನಿಂದಿಸಿ, ಚೀಮಾರಿ ಹಾಕುತ್ತಿದ್ದರು; ಅಷ್ಟೇ ಅಲ್ಲ, ಅವನನ್ನು ದೂರ

ಸ್ಥಳಕ್ಕೆ ವರ್ಗಾಯಿಸಿ, ಅಥವಾ ಬೇರೆ ವಿಧದಲ್ಲಿ, ತಕ್ಕಹಾಗೆ ಶಿಕ್ಷಿಸುತ್ತಿದ್ದರು. ದುಷ್ಟ ನಿಗ್ರಹ ವಿಷಯದಲ್ಲಿ ರಂಗಾಚಾರ್ಯರಂತಹ ನಿರಂಕುಶ ಪ್ರಭುವೇ ಇಲ್ಲ. ಎಷ್ಟು ಹೊತ್ತಿನಲ್ಲಂದರೆ ಅಷ್ಟು ಹೊತ್ತಿನಲ್ಲಿ, ಎಲ್ಲಿಗೆಂದರಲ್ಲಿಗೆ ಹೊರಟು, ಅಧಿಕಾರಿಗಳ ನಡತೆಯನ್ನು ನಾನಾ ವಿಧದಲ್ಲಿ ಪರೀಕ್ಷಿಸಿ, ಚಾಕರರನ್ನು ಹದ್ದಿನಲ್ಲಿಡುತ್ತಿದ್ದರು. ಅವರ ಕಾಲದಲ್ಲಿ ಕೆಟ್ಟ ಚಾಲುಳ್ಳ ಅಧಿಕಾರಿಗಳಿಗೆ ರಂಗಾಚಾರ್ಯರೆಂದರೆ ಆನೆಗೆ ಸಿಂಹ ಸ್ವಪ್ನವಾದ ಹಾಗೆ! ಡೆಪ್ಯುಟಿ ಕಮಿಷನರುಗಳೇ ಮೊದಲಾದ ದೊಡ್ಡ ಅಧಿಕಾರಿಗಳು ಜಮಾಬಂದಿಗಾಗಿ ಹೊರಟಾಗ ಅಮಲ್ದಾರರುಗಳಿಗೆ ಕಾಗದ ಬರೆದು ಬಿಟ್ಟೇ ಸರಬರಾಯಿ ಮಾಡಿಸಿಕೊಳ್ಳುತ್ತಿದ್ದ ಸಂಗತಿಯು ಒಂದಾವರ್ತಿ ರಂಗಾಚಾರ್ಯರ ಗಮನಕ್ಕೆ ಬಿತ್ತು. ಅವರು ಕೂಡಲೆ ಆ ಪದ್ಧತಿಯನ್ನು ನಿಲ್ಲಿಸಬೇಕೆಂದು ಶಾಸನ ಮಾಡಿದರು. ಇದೇ ರೀತಿ ರೈತಾಪಿ ಜನಗಳಿಗೆ ಕಿರುಕುಳವನ್ನುಂಟುಮಾಡುವ ಅಧಿಕಾರಿಗಳ ನಡತೆಯನ್ನು ತಿದ್ದುವುದರಲ್ಲಿಯೂ ರಂಗಾಚಾರ್ಯರು ನಿರ್ದಾಕ್ಷಿಣ್ಯಪರರಾಗಿಯೂ, ಸ್ವಲ್ಪವೂ ಪಾಲುಮಾರದವರಾಗಿಯೂ ಇದ್ದರು.

ರಂಗಾಚಾರ್ಯರಲ್ಲಿದ್ದ ಮತ್ತೊಂದು ದೊಡ್ಡ ಗುಣವೇನೆಂದರೆ:—ಅವರು ದೇಶೀಯರನ್ನೇ ಕೂಡಿದ ಮಟ್ಟಿಗೂ ದೊಡ್ಡ ಪದವಿಗಳಿಗೆ ನಿಯಮಿಸುತ್ತಿದ್ದುದು. ಸರಕಾರದ ನೌಕರರಿಗೆ ಸಂಬಳ ಕೊಡಲು ಹಣವು ದೇಶೀಯ ಪ್ರಜೆಗಳಿಂದ ಬರುವುದೇ ಅಲ್ಲವೆ? ಆದಕಾರಣ ಆ ವರುಮಾನವನ್ನು ಕೂಡಿದ ಮಟ್ಟಿಗೂ ದೇಶೀಯರಿಗಾಗಿಯೇ ಉಪಯೋಗಿಸುವುದು ಧರ್ಮವಾಗಿರುವುದು. ಹಾಗಿಲ್ಲದೆ ಹಣದಾಸೆಗಾಗಿ ಓಡಿಬರುವವರನ್ನು ಸರಕಾರದ ಅಧಿಕಾರಗಳಿಗೆ ನಿಯಮಿಸಿದರೆ, ಅವರು ತಮ್ಮ ಆದಾಯದಮೇಲೆ ಹೆಚ್ಚು ಗಮನವಿಟ್ಟು, ಮಿಕ್ಕ ವಿಷಯಗಳಲ್ಲಿ ನಿಶ್ಚಯವಾದ ಶ್ರದ್ಧೆಯಿಲ್ಲದಿರುವರು. ಅದರಿಂದ ದೇಶೀಯರಿಗೆ ಶಾಶ್ವತವಾದ ಪ್ರಯೋಜನವಿಲ್ಲದೆ ಹೋಗಿ, ಅವರಲ್ಲಿ ಬುದ್ಧಿವಂತರೂ ವಿದ್ಯಾವಂತರೂ ಆದವರಿಗೆ ಪ್ರೋತ್ಸಾಹವೂ, ಸ್ವದೇಶ ಸೇವೆಗೆ ತಕ್ಕ ಅವಕಾಶವೂ ಬೆಳೆಯದೆ, ದೇಶದ ಹಣವನ್ನು ಹೊರಗಿನವರು ದೋಚಿಕೊಂಡು ಹೋದಂತಾಗುವುದು. ಯಾವ ಸಂದರ್ಭದಲ್ಲಿ ಸಂಸ್ಥಾನ

ದೊಳಗೆ ತಕ್ಕ ಜನರು ಸಿಕ್ಕದೆ, ಹೊರಗಿನವರು ಬಾರದಿದ್ದರೆ ತೀರದೋ ಅಂಥಾ ಸಂದರ್ಭದಲ್ಲಿ ಮಾತ್ರ ಹೊರಗಿನಿಂದ ಬುದ್ಧಿವಂತರಾದವರನ್ನು ಆರಿಸಿ ಕರೆಸಿಕೊಳ್ಳುವುದು ನ್ಯಾಯುವೇ ಸರಿ. ಆದರೆ ಯಾವ ಕಾರ್ಯ ಗಳನ್ನು ದೇಶೀಯರೇ ನಿರ್ವಹಿಸಬಲ್ಲರೋ ಅಂಥವುಗಳಿಗೆ ಹೊರಗಿನವ ರನ್ನು ತರುವುದು ಅನ್ಯಾಯು. ಇದೂ ಅಲ್ಲದೆ, ದೇಶೀಯರ ಜಾತಿ ಪದ್ಧತಿ ಭಾಷೆಗಳನ್ನರಿಯುದೆ,—ಅವರಲ್ಲಿ ಸಂಪರ್ಕ ಬೆಳೆಸದೆ,—ದೇಶಕ್ಕೆ ಯಾವ ಸ್ಥಿರಸಂಬಂಧವೂ ಇಲ್ಲದೆ ಇರುವ ಹೊರಗಿನವರು ತೃಪ್ತಿಕರ ವಾಗಿ ರಾಜ್ಯ ಕಾರ್ಯಗಳನ್ನು ನಡೆಯಿಸಲು ಬೇಕಾದ ಉತ್ಸಾಹ ಶಕ್ತಿಗಳನ್ನು ಪಡೆದಿರುವುದು ಅಸಾಧ್ಯ. ಈ ತತ್ತ್ವವನ್ನು ರಂಗಾ ಚಾರ್ಯರು ಚೆನ್ನಾಗಿ ಗೊತ್ತುಮಾಡಿಕೊಂಡು, ಮೈಸೂರು ದೇಶೀ ಯುರಿಗೆ ವಿಶೇಷ ಪ್ರೋತ್ಸಾಹಕೊಟ್ಟು, ಅವರನ್ನು ದೊಡ್ಡ ಅಧಿಕಾರ ಗಳಿಗೆ ತರಬೇತು ಮಾಡುತ್ತಿದ್ದರು.

ಐರೋಪ್ಯ ಜನರ ವಿಷಯುದಲ್ಲಿ ರಂಗಾಚಾರ್ಯರಿಗೆ ಭೀತಿ ಯಾಗಲಿ ಪಕ್ಷಪಾತವಾಗಲಿ ಸ್ವಲ್ಪ ಮಾತ್ರವೂ ಇರಲಿಲ್ಲ. ತಮ್ಮ ಕೈಕೆಳಗಿದ್ದ ಆಂಗ್ಲೇಯು ನೌಕರರನ್ನು ಕಾಣುವುದರಲ್ಲಿಯೂ, ರೆಸಿಡೆಂಟ್ ಮೊದಲಾದ ಅಧಿಕಾರಿಗಳಲ್ಲಿ ನಡೆದುಕೊಳ್ಳುವುದರಲ್ಲಿಯೂ, ಮಿಷನೆರಿ ಪಾದರಿಗಳಲ್ಲಿಯೂ, ವ್ಯಾಪಾರದ ಕಂಪೆನಿಗಳವರಲ್ಲಿಯೂ ಅವರು ನ್ಯಾಯುಮಾರ್ಗವನ್ನನುಸರಿಸುತ್ತಿದ್ದರೇ ಹೊರತು ದಾಕ್ಷಿಣ್ಯ ಕ್ಕೊಳಗಾಗುತ್ತಿರಲಿಲ್ಲ. ದೇಶದೊಳಗಿನ ದೊಡ್ಡ ಅಧಿಕಾರಗಳಿಗೆ ಬೇರೆ ವಿಧಿಯಿಲ್ಲದಿದ್ದಾಗ ಮಾತ್ರವೇ ಐರೋಪ್ಯರನ್ನು ನಿಯುಮಿಸುತ್ತಿದ್ದರು. ಈ ಸಂಸ್ಥಾನದವರೇ ಕಾಲಕ್ರಮೇಣ ರಾಜ್ಯದ ಅಧಿಕಾರಗಳಿಗೆ ತಯಾ ರಾಗಿ, ಹೊರಗಿನವರ ಆವಶ್ಯಕತೆಯೇ ಇರದಂತೆ ಆಗಬೇಕೆಂಬುದು ಅವರ ದೃಢವಾದ ಅಭಿಲಾಷೆಯಾಗಿತ್ತು.

# ಪರಿಚ್ಛೇದ ೮

## ವಿದ್ಯಾ ಪ್ರಚಾರ—ದೇಶಭಾಷಾಭಿಮಾನ

"ಸರ್ವ ದ್ರವ್ಯೇಷು ವಿದ್ಯೈವ ದ್ರವ್ಯಮಾಹುರನುತ್ತಮಂ"

ವಿದ್ಯಾ ಪ್ರಚಾರಣೆಯ ವಿಷಯದಲ್ಲಿ ರಂಗಾಚಾರ್ಯರು ಅನುಸರಿಸಿದ್ದ ಪದ್ಧತಿಯು ಬಲು ಶ್ಲಾಘ್ಯವಾದುದು. ೧೮೮೫ನೆಯ ಮಾರ್ಚಿ ೨೪ರಲ್ಲಿ ಮೈಸೂರಿನ ಮಹಾಪಾಠಶಾಲೆಯ (ಕಾಲೇಜು) ವಿದ್ಯಾರ್ಥಿಗಳಿಗೆ "ಇನಾಂ" ಹಂಚುವ ವಾರ್ಷಿಕ ಸಭೆಯು ನಡೆಯಿತು. ಶ್ರೀಮನ್ಮಹಾರಾಜ ಚಾಮರಾಜೇಂದ್ರ ಒಡೆಯರ್, ಜಿ.ಸಿ.ಎಸ್.ಐ., ಅವರು ಅಗ್ರಾಸನವನ್ನಲಂಕರಿಸಿದ್ದರು. ಆಗ ದಿವಾನ್ ರಂಗಾಚಾರ್ಯರು, ಪ್ರಭುಗಳವರ ಅಪ್ಪಣೆಯ ಮೇರೆಗೆ, ದೇಶದಲ್ಲಿಯ ವಿದ್ಯಾ ಪ್ರಚಾರ ಕ್ರಮವನ್ನು ಕುರಿತು ಒಂದು ದೊಡ್ಡ ಉಪನ್ಯಾಸವನ್ನು ಮಾಡಿದರು. ಆ ಭಾಷಣವು ವಿಚಾರಗರ್ಭಿತವಾಗಿ, ಬೋಧಪ್ರದವಾಗಿ, ಪುನಃ ಪುನಃ ಓದಲರ್ಹವಾಗಿದೆ. ಅವರು ಸೂಚಿಸಿದ ಅಭಿಪ್ರಾಯಗಳೇನೆಂದರೆ :—

### ಪ್ರೌಢ ವಿದ್ಯಾಭ್ಯಾಸ

**"ಯಾವ ಸಮಾಜದಲ್ಲಿ ಪ್ರೌಢ ವಿದ್ಯಾವಂತರು ಪ್ರಬಲಿಸುವುದಿಲ್ಲವೋ ಆ ಸಮಾಜವು ಏಳಿಗೆಹೊಂದಲಾರದು. ಪ್ರೌಢ ಪಾಠಶಾಲೆಗಳಿಲ್ಲದೆ ಹೋದರೆ, ಬಾಲ ಪಾಠಶಾಲೆಗಳು ಎಂದಿಗೂ ಪರಿಪೂರ್ಣವಾಗಲಾರವು. ಈ ಪ್ರೌಢ ಪಾಠಶಾಲೆಗಳಿಗೆ ಎಲ್ಲಾ ತರಗತಿಯ ಜನರೂ ಬಂದು ಸೇರಿ, ಯಥಾಯೋಗ್ಯವಾದ ವಿದ್ಯಾರ್ಥಿವೇತನಗಳ ಮೂಲಕ ಬುದ್ಧಿಶಾಲಿಗಳಾದ ಬಡಹುಡುಗರೂ ಆ ಪಾಠಶಾಲೆಗಳನ್ನು ಪ್ರವೇಶಿಸುವಂತಾದರೆ ಆ ಮಹಾಪಾಠಶಾಲೆಗಳಿಂದ ಒಬ್ಬರಿಬ್ಬರಿಗೆ ಮಾತ್ರವಲ್ಲದೆ ದೇಶಕ್ಕೆಲ್ಲಾ ಪ್ರಯೋಜನವುಂಟೆಂದು ಸರಕಾರದವರು ತಿಳಿದಿರುವರು."**

### ಸಾಮಾನ್ಯ ವಿದ್ಯಾಭ್ಯಾಸ

**"ಪೂರ್ವದ ಮಠ(ಪಾಠಶಾಲೆ)ಗಳಲ್ಲಿ ವಿದ್ಯಾಭ್ಯಾಸ ಕ್ರಮವು ಪಟುವಾಗಿರಲು ಕಾರಣವಾಗಿದ್ದ ಉಪಾಧ್ಯಾಯರ ಮತ್ತು ವಿದ್ಯಾರ್ಥಿ ಪೋಷಕರ ಅನ್ಯೋನ್ಯ ಭಾವವನ್ನು ಈಗಿನ ಸರಕಾರದ 'ಹೋಬಳೀ ಸ್ಕೂಲು'ಗಳು ಹೋಗಲಾಡಿಸುತ್ತವೆ. ಒಬ್ಬ ಗ್ರಾಮಸ್ಥನು**

ತನ್ನ ಮಕ್ಕಳಿಗೆ ವಿದ್ಯೆ ಹೇಳಿಸಲು ಆಸಕ್ತಿಯುಳ್ಳವನಾದರೆ, ಅವನು ಉಪಾಧ್ಯಾಯನೊಡನೆ ಒಪ್ಪಂದಮಾಡಿಕೊಂಡು, ಅದಕ್ಕಾಗಿ ತನ್ನ ಯೋಗ್ಯತೆಗೆ ಹೆಚ್ಚಿದ ಹಣವನ್ನು ವೆಚ್ಚಮಾಡುತ್ತಾನೆ. ಆದರೆ ಜನರಿಗೆ ವಿದ್ಯೆಯಲ್ಲಿ ಆಸಕ್ತಿಯಿಲ್ಲದ ಪಕ್ಷಕ್ಕೆ ಅವರನ್ನು ನಿರ್ಬಂಧಪಡಿಸುವುದರಿಂದ ಅವರಿಗೆ ಅದು ಮತ್ತಷ್ಟು ಬೇಡವಾಗುವುದು. ವಿದ್ಯಾಭ್ಯಾಸವು ಬೇರೆಯಿನ್ನಾವುದಾದರೂ ಒಂದು ವಿಷಯವನ್ನು ಸಾಧಿಸುವುದರಲ್ಲಿ ಉಪಯೋಗವಾಗುವ ಸಾಧನವೇ ಹೊರತು ಅದರಿಂದಲೇ ಮುಖ್ಯ ಪ್ರಯೋಜನವಾಗುವುದಿಲ್ಲ. ಜನರಿಗೆ ವಿದ್ಯೆ ಕಲಿಯಬೇಕೆಂಬ ಅಪೇಕ್ಷೆ ಹುಟ್ಟಬೇಕಾದರೆ ಅವರಿಗೆ ರಾಜಕೀಯ ವ್ಯವಹಾರದಲ್ಲಿ ಹೋಗಬೇಕೆಂಬ ಆಶೆಯಾಗಲಿ, ಮತ ವಿಷಯದಲ್ಲಿ ಪ್ರವೇಶಿಸಬೇಕೆಂಬ ಆಶೆಯಾಗಲಿ, ವ್ಯಾಪಾರದಲ್ಲಿ ಪ್ರಬಲಿಸಬೇಕೆಂಬ ಆಶೆಯಾಗಲಿ ಇರಬೇಕು.''

## ವಿದ್ಯಾವಂತರ ಕರ್ತವ್ಯ

''ರಾಜಕೀಯ ವ್ಯವಹಾರದ ಆಶೆಯಾಗಲಿ ಮತಾಧಿಕಾರವಾಗಲಿ ಯಾವುದೂ ಇಲ್ಲದ ಬಹುಸಂಖ್ಯಾಕರಾದ ರೈತಾಪಿ ಜನಗಳು—ಪ್ರತಿದಿನವೂ ತಮ್ಮ ಮಕ್ಕಳು ಪಾಠಶಾಲೆಯಲ್ಲಿ ಹಾಜರಿರಬೇಕಾದ ಕಾರಣ,—ತಮ್ಮ ಕಸಬಿಗೆ ವಿದ್ಯಾಭ್ಯಾಸವು ಅಪಾಯಕರವೆಂದು ಎಣಿಸಿರುವರು. ಆದಕಾರಣ ಮೊದಲು ವ್ಯವಸಾಯಗಾರರಲ್ಲಿ ವಿದ್ಯೆ ಕಲಿಯಬೇಕೆಂಬ ಅಪೇಕ್ಷೆಯನ್ನುಂಟುಮಾಡಬೇಕು. ಇಷ್ಟು ಮಾತ್ರ ಮಾಡಿದರೆ ಆಮೇಲೆ ಸರಕಾರವು ಅವರ ವಿದ್ಯಾಭ್ಯಾಸಕ್ಕಾಗಿ ಏನೂ ವೆಚ್ಚಮಾಡಬೇಕಾದುದಿಲ್ಲ. ರೈತರ ಸ್ಥಿತಿಯು ಉತ್ತಮಗೊಂಡು, ಅವರು ತಮ್ಮ ಯೋಗ್ಯತೆಯನ್ನು ತಿಳಿದುಕೊಳ್ಳುವಂತಾಗುವುದು ಅತ್ಯಂತಾವಶ್ಯಕ. ಆ ಸ್ಥಿತಿಯುಂಟಾಗುವಂತೆ ಸ್ವಲ್ಪ ಮಟ್ಟಿಗಾದರೂ ಮಾಡುವುದಕ್ಕಾಗಿ ಶ್ರೀಮನ್ಮಹಾರಾಜಾ ಸರಕಾರದವರು, ರಾಜ್ಯದ ಆಡಳಿತಗಳನ್ನು ವಿಚಾರಿಸುವುದಕ್ಕೋಸ್ಕರ ಪ್ರಜಾಪ್ರತಿನಿಧಿಗಳು ವರ್ಷಕ್ಕೊಂದಾವರ್ತಿ ಸಭೆ ಸೇರಬೇಕೆಂದು ಗೊತ್ತುಮಾಡಿರುವರು. (ಹಾಗೆ ಮಾಡಿರುವುದರಿಂದ) ಜನರು ತಮಗೊಂದು ಗೌರವವುಂಟೆಂದು ತಿಳಿದುಕೊಂಡಕೂಡಲೆ, ಕನಿಷ್ಠಪಕ್ಷ ಓದು ಬರಹ ಲೆಕ್ಕಾಚಾರಗಳನ್ನಾದರೂ ಕಲಿಯಬೇಕೆಂದು ಅವರು ಅಪೇಕ್ಷಿಸುವರು. ಅವರಿಗೆ ಬೇಕಾದ ಸಾಮಾನ್ಯ ವಿದ್ಯಾಭ್ಯಾಸದೊಡನೆ ಐರೋಪ್ಯಶಾಸ್ತ್ರ ವಿಷಯಗಳನ್ನು ಬೆರೆಸುವುದು ಸದ್ಯಃ ಒಳ್ಳೆಯದಲ್ಲ. ಅವರಿಗೆ ಬೇಕಾದುದನ್ನು ಅವರ ಪಾಠಶಾಲೆಗಳಲ್ಲಿಯೇ ತಮ್ಮ ಇಷ್ಟಾನುಕೂಲಗಳಿಗೆ ತಕ್ಕಂತೆ ಕಲಿತುಕೊಳ್ಳಲು ಬಿಡುವುದು ಉತ್ತಮ. ಈಗ ಬೇಕಾದುದೇನೆಂದರೆ,—ಸುಶಿಕ್ಷಿತರಾದ ಒಳ್ಳೆಯ ಉಪಾಧ್ಯಾಯರು ಹಳ್ಳಿಯಿಂದ ಹಳ್ಳಿಗೆ ಸುತ್ತುತ್ತಾ, ಪ್ರಜೆಗಳು ಉಪಯೋಗಕರವೆಂದೆಣಿಸಿರುವ ವಿಷಯಗಳನ್ನು ಅವರ ಮನಸ್ಸಿಗೆ

ಹಿಡಿಯುವ ರೀತಿಯಲ್ಲಿ ಬೋಧಿಸಬೇಕು. ಆ ವಿಷಯಗಳನ್ನು ಕುರಿತ ದೇಶಭಾಷಾ (ಕನ್ನಡ) ಪುಸ್ತಕಗಳೂ, ಇತರ ದೇಶಭಾಷಾ ಗ್ರಂಥಾಭಿವೃದ್ಧಿಯೂ ಸಹ ಅತ್ಯಾವಶ್ಯಕ.

"ಇದಕ್ಕೆಲ್ಲವೂ ಬೇಕಾದುದು ಧನವ್ಯಯವಲ್ಲ; ಸ್ವದೇಶೀಯರ ಅಭ್ಯುದಯದಲ್ಲಿ ಆಸಕ್ತರಾಗಿರುವ ವಿದ್ಯಾವಂತರಾದ ದೇಶೀಯರು ಹೆಚ್ಚಿ, ಅವರಿಂದಲೇ ಈ ಕೆಲಸವು ನಡೆಯಬೇಕಾಗಿದೆ."

## ಪ್ರಜಾಜನ ಪುರಸ್ಕಾರ

"ಸರಕಾರದವರು ದೇಶೀಯರಿಗೆ ಲಾಭಕರಗಳಾದ ಉದ್ಯೋಗಗಳನ್ನು ಕಲ್ಪಿಸಿ ಕೊಟ್ಟಿರುವರು. ಆದರೆ ಅದಕ್ಕಿಂತಲೂ ಹೆಚ್ಚು ಆವಶ್ಯಕವಾದುದೇನೆಂದರೆ, ರಾಜ್ಯ ಸಂಸ್ಥೆಯ ಎಲ್ಲಾ ಇಲಾಖೆಗಳ ಆಡಳಿತದಲ್ಲಿಯೂ ಪ್ರಜೆಗಳ ಅಭಿಪ್ರಾಯವು ಪ್ರಬಲಿಸಿ, ಸರಕಾರದ ನೌಕರಿಗಳು ರಾಜ್ಯಕ್ಕೆ ಸಂಬಂಧಪಟ್ಟವೇ ಹೊರತು ಇಷ್ಟ ಮಿತ್ರರಿಗೆ ಕೊಡಲ್ಪಡತಕ್ಕವಲ್ಲವೆಂದು ರಾಜ್ಯಾಧಿಕಾರಿಗಳು ನಡೆದುಕೊಳ್ಳುವ ರೀತಿ ಯಲ್ಲಿ ಅವರನ್ನು ತಿದ್ದಿ ಸರಿಪಡಿಸಬೇಕು. ಪ್ರಜೆಗಳ ಮಧ್ಯದಲ್ಲಿ ವೇತನ ಜೀವಿಗಳಾದ ಅಧಿಕಾರಿಗಳೇ ಪ್ರಬಲರಾಗಿರುವುದನ್ನು ತಪ್ಪಿಸಿ, ಪ್ರಜೋಪಕಾರಕವಾದ ಮತ್ತು ಪ್ರಜೆಗಳಲ್ಲಿ ಪ್ರಾಬಲ್ಯವನ್ನುಂಟುಮಾಡುವ ಸ್ಥಾನಗಳಿಗೆ ಸರಕಾರದ ಅಧಿಕಾರಿಗಳಲ್ಲದ ಜಮೀನುದಾರರೇ ಮೊದಲಾದವರನ್ನು ಗೌರವಾರ್ಥವಾಗಿ (ಸಂಬಳವಿಲ್ಲದೆ) ನಿಯಮಿಸ ಬೇಕು."

## ವಿದ್ಯಾರ್ಥಿಗಳಿಗೆ ಹಿತೋಕ್ತಿಗಳು

"ವಿದ್ಯಾವಂತರಿಂದ ತಮ್ಮ ದೇಶೀಯರಿಗೆ ಏನೂ ಪ್ರಯೋಜನವಿಲ್ಲವೆಂದು ನಮ್ಮ ಜನರಿಗೆ ಬಂದಿರುವ ಅಪವಾದವನ್ನು ಹೋಗಲಾಡಿಸುವುದು ನಿಮ್ಮ ಕರ್ತವ್ಯ. ನಿಮ್ಮ ನಾನಾ ವಿಧದ ವೃತ್ತಿಗಳಲ್ಲಿ ನೀವು ಎಷ್ಟು ಮಟ್ಟಿಗೆ ನಮ್ಮ ದೇಶೀಯರ ಅಭಿವೃದ್ಧಿಗಾಗಿ ಕೆಲಸಮಾಡುವಿರೋ ಅದಕ್ಕೆ ತಕ್ಕಂತೆ ನಿಮಗೆ ಮನ್ನಣೆ ದೊರೆಯುವುದು. ಕಳೆದ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದವರಿಗೆ, ಅವರ ಜಯದಿಂದ ನನಗೆ ತುಂಬಾ ಸಂತೋಷ ವಾಗಿದೆಯೆಂದು ಸೂಚಿಸುತ್ತೇನೆ. ಅವರ ಜಯವು ಈ ವಿದ್ಯಾಶಾಲೆಗೆ ಬಲು ಒಳ್ಳೆಯ ಹೆಸರನ್ನು ತರುವುದು. ಅವರ ಮುಂದಿನ ವೃತ್ತಿಗಳಲ್ಲಿಯೂ ಇದೇ ರೀತಿ ಶುಭ ಫಲ ಗಳುಂಟಾಗಲೆಂದು ಹಾರೈಸುತ್ತೇನೆ. ಮೇಲೆ ಹೇಳಿದ ಜಯದಲ್ಲಿ ಭಾಗಿಗಳಾಗುವಷ್ಟು ಅದೃಷ್ಟವಿಲ್ಲದಿದ್ದವರಿಗೂ ಒಂದು ಮಾತು ಹೇಳಬೇಕೆಂದಿರುವೆನು. ಪ್ರಯತ್ನಪಟ್ಟು ಫಲವನ್ನು ಕಾಣದೆ ಹೋದವರು ನಿರುತ್ಸಾಹಿಗಳಾಗಲು ಕಾರಣವಿಲ್ಲ. ಇತರರಿಗೆ

ಸಮನಾಗಿಯೇ ಅವರೂ ವಿದ್ಯೆ ಕಲಿತಿರುವರು. ಜಯಶೀಲರಾದವರು ತಮ್ಮ ಆಶೆಯು ನೆರವೇರಿತೆಂದು ನಿಶ್ಚಿಂತರಾಗುವರು. ನೀವು (ಜಯಶೀಲರಲ್ಲದವರು) ಇನ್ನೂ ಅದನ್ನು ಸಾಧಿಸಬೇಕಾಗಿದೆ. ಜೀವಮಾನವೆಂಬ ಯುದ್ಧದಲ್ಲಿ, ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದು ವವರು ಎಷ್ಟರ ಪ್ರಾಶಸ್ತ್ಯವನ್ನು ಹೊಂದಬಹುದೋ, ಪಾಠಶಾಲೆಯಲ್ಲಿ ಜಯಶೀಲರಾಗ ದವರೂ ಅಷ್ಟರ ಪ್ರಾಶಸ್ತ್ಯಕ್ಕೆ ಬರಬಹುದೆಂದು ಕಂಡುಬರುವುದು.''

ಈ ಉಪನ್ಯಾಸದಿಂದ ರಂಗಾಚಾರ್ಯರಿಗೆ ವಿದ್ಯಾಭ್ಯಾಸದ ವಿಷಯದಲ್ಲಿದ್ದ ಅಭಿಪ್ರಾಯಗಳು ಚೆನ್ನಾಗಿ ವ್ಯಕ್ತವಾಗುವುವಲ್ಲದೆ, ಪ್ರಜಾಪ್ರತಿನಿಧಿ ಸಭೆಯ ವಿಷಯದಲ್ಲಿ ಅವರಿಗಿದ್ದ ಅನೇಕ ತಾತ್ಪರ್ಯ ಗಳೂ ತಿಳಿದು ಬರುವುವು. ದೇಶೀಯರಲ್ಲಿ ಸಾಮಾನ್ಯ ವಿದ್ಯೆಯನ್ನು ಪ್ರಚುರಗೊಳಿಸಲು ಯಾವ ಉಪಾಯವನ್ನನುಸರಿಸಬೇಕೆಂದು ರಂಗಾ ಚಾರ್ಯರು ಅಭಿಪ್ರಾಯಪಟ್ಟಿರುವರೋ ಅಂತಹ ಅಭಿಪ್ರಾಯವನ್ನೇ ಪರಮಪದವನ್ನು ಸೇರಿದ ಶ್ರೀ ವಿವೇಕಾನಂದಸ್ವಾಮಿಗಳವರು ಗತಿಸಿದ ಮಹಾರಾಜರವರಿಗೆ ಒಂದು ಕಾಗದದಲ್ಲಿ ಬರೆದಿದ್ದರು. ತಾವು ಸೂಚಿಸಿದ ಕ್ರಮವನ್ನು ಚಲಾವಣೆಗೆ ತಂದು ಸ್ಥಿರಪಡಿಸುವಷ್ಟು ಕಾಲ ರಂಗಾಚಾರ್ಯರು ಬದುಕಲಿಲ್ಲ. ಇತರ ವಿಷಯಗಳಲ್ಲಿದ್ದಂತೆಯೇ ಈ ವಿಷಯದಲ್ಲಿ ಸಹ, ಜನಗಳು ತಾವಾಗಿಯೇ—ಅಧಿಕಾರಿವರ್ಗದ ಅಪೇಕ್ಷೆ ಯನ್ನು ಬಿಟ್ಟು—ತಕ್ಕ ಕಾರ್ಯಭಾಗಗಳನ್ನು ನಡೆಯಿಸಿಕೊಳ್ಳ ಬೇಕೆಂದು ಅವರು ನಿಶ್ಚಯಿಸಿದ್ದರು.

## ಸ್ತ್ರೀ ವಿದ್ಯಾಭ್ಯಾಸ

೧೮೮೩ನೆಯ ಮಾರ್ಚಿ ೨೧ನೆಯ ದಿನ ಶ್ರೀಮನ್ಮಹಾರಾಣಿ ಯವರ ಬಾಲಿಕಾ ಪಾಠಶಾಲೆಯಲ್ಲಿ ವಿದ್ಯಾರ್ಥಿನಿಯರಿಗೆ ಬಹುಮಾನ ಹಂಚುವ ಮಹೋತ್ಸವವು ನೆರವೇರಿತು. ಶ್ರೀಮನ್ಮಹಾರಾಜರವರೇ ಸಭಾಧ್ಯಕ್ಷರಾಗಿದ್ದರು. ಸ್ತ್ರೀ ವಿದ್ಯಾಭ್ಯಾಸವು ಈ ದೇಶದಲ್ಲಿ ಹರಡಲು ಆಗತಾನೆ ಮೊದಲು. ಮಹಾರಾಣಿಯವರ ಪಾಠಶಾಲೆಯು ಸ್ಥಾಪಿತ ವಾಗಿ ಆಗಿಗೆ ೧೪ ತಿಂಗಳು ಮಾತ್ರವೇ ಆಗಿತ್ತು. ದಿವಾನ್ ರಂಗಾ ಚಾರ್ಯರು ಆಗ ಕೊಟ್ಟ ಉಪನ್ಯಾಸದ ಒಂದಂಶವು ಎಂದೆಂದಿಗೂ ಗಮನದಲ್ಲಿರಲು ಯೋಗ್ಯವಾಗಿದೆ:—

"(ಬಾಲಿಕಾ ಪಾಠಶಾಲೆಗಳ) ಅಧಿಕಾರಿಗಳು ವಿದ್ಯಾರ್ಥಿನಿಯರ ಮತಾಚಾರಗಳ ಗೋಜಿಗೆ ಹೋಗದಿರುವುದು ಮಾತ್ರವೇ ಅಲ್ಲದೆ, ಈ ಪಾಠಶಾಲೆಗಳಲ್ಲಿ (ವಿದ್ಯಾರ್ಥಿನಿಯರ) ಕುಲಕ್ಕೆ ಸಹಜವಾದ ಗುಣಗಳು ದೃಷ್ಟಿಗೆ ಬಾರದೆ ಕ್ಷೀಣಿಸಿಹೋದಾವೆಂಬ ಅಪಾಯವನ್ನು ಗಮನದಲ್ಲಿಟ್ಟು, ಜಾಗರೂಕತೆಯಿಂದ ಹಾಗಾಗದಂತೆ ನೋಡಿಕೊಳ್ಳಬೇಕು. ಪಾಠಶಾಲೆಯಲ್ಲಿ ಪರೀಕ್ಷೆಗಳನ್ನಿಟ್ಟು, ಸ್ಪರ್ಧೆ(ಪಂಥ ಅಥವಾ ಪಂದ್ಯ)ಗಳ ಮೂಲಕ ವಿದ್ಯಾಭ್ಯಾಸ ಮಾಡಿಸುವುದರಿಂದ ಡಾಂಭಿಕತೆಯೂ, ನೋಟಗಾರಿಕೆಗೆ ತಕ್ಕ ನಡತೆಯೂ ಉಂಟಾಗಿ, ಗಂಭೀರವೂ ಘನವೂ ಆದ ಗುಣಗಳು ಕಡಿಮೆಯಾಗುವುದುಂಟು. ಆದುದರಿಂದ ಶಿಷ್ಯೆಯರಿಗೆ ಹಿರಿಯರ ಮಾತಿನಲ್ಲಿ ಸ್ವಾಭಾವಿಕವಾಗಿರುವ ಭಕ್ತಿಯನ್ನು ಸರ್ವಪ್ರಯತ್ನಗಳಿಂದಲೂ ಕಾಪಾಡುವುದು ಅತ್ಯಂತ ಮುಖ್ಯ. ಇವೆಲ್ಲವೂ ನಮ್ಮ ಬಾಲಿಕಾ ಪಾಠಶಾಲೆಗಳ ಕಾರ್ಯನಿರ್ವಾಹದಲ್ಲಿ ಕಷ್ಟವೂ ಸೂಕ್ಷ್ಮವೂ ಆದ ಅಂಶಗಳು."

ವಧೂ ವಿದ್ಯಾ ವಿಷಯದಲ್ಲಿ ಇದಕ್ಕಿಂತಲೂ ಮುಖ್ಯವಾದ ವಿಷಯವಾವುದೂ ಇಲ್ಲ. ಅವರವರ ಕುಲ ಮತಗಳಿಗೆ ಅನೇಕ ತಲೆಮಾರಿಗಳಿಂದ ಬಂದಿರುವ ಸದಾಚಾರ ಸತ್ಸಂಪ್ರದಾಯಗಳನ್ನು ಹೋಗಲಾಡಿಸದೆ, ಅವುಗಳನ್ನು ಕಾಪಾಡಿ, ಅವುಗಳ ಜೊತೆಗೆ ಹೊಸ ಸದ್ಗುಣಗಳನ್ನುಂಟುಮಾಡಿಕೊಡುವ ವಿದ್ಯೆಯನ್ನು ಸ್ತ್ರೀಯರಿಗೆ ಕೊಡಿಸುವುದೇ ಸರ್ವ ಸಮ್ಮತವಾದ ಕ್ರಮ.

ಮಹಾರಾಣಿಯವರ ಪಾಠಶಾಲೆಯನ್ನು ಪ್ರತಿಷ್ಠಿಸುವುದರಲ್ಲಿಯೂ ಸ್ತ್ರೀವಿದ್ಯಾಪ್ರಚಾರದಲ್ಲಿಯೂ ಪ್ರಮುಖರಾಗಿದ್ದ (ಈ ಗ್ರಂಥಕ್ಕೆ ಪೀಠಿಕೆಯೊಂದನ್ನು ಬರೆದಿರುವ) ರಾಯ್ ಬಹದ್ದೂರ್ ಅಂಬಿಲ್ ನರಸಿಂಹಯ್ಯಂಗಾರ್ಯರು ಒಂದು ಉಪಾಖ್ಯಾನವನ್ನು ಹೇಳಿರುವರು. ಆ ಪಾಠಶಾಲೆಯು ಪ್ರಾರಂಭವಾದಾಗ ಜನರು ಅದನ್ನು ಕುರಿತು ಬಗೆಬಗೆಯಾಗಿ ಮಾತನಾಡಿಕೊಳ್ಳುತ್ತಿದ್ದರು. ಅಲ್ಲಿ ಹೆಣ್ಣುಮಕ್ಕಳಿಗೆ ವೀಣೆ, ಪಿಟೀಲು ಮೊದಲಾದ ವಾದ್ಯಗಳನ್ನೂ ಬಾಯಹಾಡುಗಾರಿಕೆಯನ್ನೂ ಕಲಿಸಿಕೊಡುತ್ತಿದ್ದ ಅಪೂರ್ವ ಸಂಗತಿಯು ಊರಿನ ಅಡುಗೂಲಜ್ಜಿಯರ ಮತ್ತು ಅವರ ಸಹೋದರರ ಮಾತು ಕಥೆಗಳಿಗೆ ವಿಷಯವಾಯಿತು. ಈ ದೋಷಾರೋಪಣೆಯ ಸುದ್ದಿಯು ಒಂದಾವರ್ತಿ ದಿವಾನರ ಮನೆಯವರೆಗೂ ವ್ಯಾಪಿಸಲು ರಂಗಾಚಾರ್ಯರ ಸಹ

ಧರ್ಮಿಣಿಯು ವ್ಯಸನಪಟ್ಟು, ಆ ಅವಮಾನವನ್ನು ತಪ್ಪಿಸಬೇಕೆಂದು ತಮ್ಮ ಯಜಮಾನರಲ್ಲಿ ಅರಿಕೆಮಾಡಿಕೊಂಡರು. ಅದರ ಮೇಲೆ ರಂಗಾಚಾರ್ಯರೂ ವ್ಯಾಕುಲಿತ ಚಿತ್ತರಾಗಿ, ಪಾಠಶಾಲೆಗೆ ಹೋಗಿ, ಅಲ್ಲಿಯ ಸಂಗೀತ ಶಾಸ್ತ್ರ ಬೋಧಕನನ್ನು ಬೈದು, ಅವನನ್ನು ಮನೆಗೆ ಓಡಿಸುತ್ತಿದ್ದರು. ಅಷ್ಟರಲ್ಲಿ ನರಸಿಂಹಯ್ಯಂಗಾರ್ಯರು ದೈವವಶಾತ್ ಅಲ್ಲಿಗೆ ಬರಲು ಅವರಿಗೂ ದಿವಾನರಿಂದ ವಾಕ್ಪ್ರಹಾರವಾಯಿತು. ಆದರೂ ಅವರು ರಂಗಾಚಾರ್ಯರಿಗೆ ತಾಳ್ಮೆಯನ್ನು ತೋರಬೇಕೆಂದು ಬಿನ್ನಯಿಸಿಕೊಂಡು, ಆ ಸಂಗೀತಗಾರನು ಹೇಗೆ ಪಾಠ ಹೇಳು ತ್ತಿದ್ದನೋ ಅದನ್ನೊಂದು ಘಂಟೆಯಕಾಲ ಸ್ವತಃ ಪರಾಮರ್ಶಿಸ ಬೇಕೆಂದು ಬೇಡಿಕೊಂಡರು. ಅದರಂತೆ ಮಾಡಿದಮೇಲೆ ರಂಗಾ ಚಾರ್ಯರು ತಮ್ಮ ಮೊದಲಿನ ಅಭಿಪ್ರಾಯವನ್ನು ಬದಲಾಯಿಸಿ, ಸಂಗೀತವು ಸ್ತ್ರೀಶಿಕ್ಷಣದ ಮುಖ್ಯಾಂಗವೆಂದು ಒಪ್ಪಿಕೊಂಡು, ಆ ವಿಷಯವನ್ನು ತಮ್ಮ ಪತ್ನಿಯವರಿಗೂ ತೋರಿಸುವಂತೆ ನರಸಿಂಹಯ್ಯಂ ಗಾರ್ಯರಿಗೆ ಹೇಳಿದರು. ಆಕೆಯೂ ಅಲ್ಲಿಯ ಸಂಗೀತ ಶಿಕ್ಷಣ ಕ್ರಮ ವನ್ನು ಕಣ್ಣಾರ ನೋಡಿದಮೇಲೆ ಅದನ್ನು ಅನುಮೋದಿಸಿ, ತಮ್ಮ ಕುಮಾರಿಯರಲ್ಲಿಬ್ಬರನ್ನು ಆ ಪಾಠಶಾಲೆಗೆ ಕಳುಹಿಸಲು ಮೊದಲು ಮಾಡಿದರು. ಈ ಆಖ್ಯಾನವು ರಂಗಾಚಾರ್ಯರಿಗೆ ಸ್ತ್ರೀಯರ ಸೌಶೀಲ್ಯ, ಪಾರಿಶುದ್ಧ್ಯ, ಮಾನಮರ್ಯಾದೆಗಳ ವಿಷಯದಲ್ಲಿದ್ದ ಜಾಗರೂಕತೆಗೆ ದೃಷ್ಟಾಂತವಾಗಿದೆ.

ಈ ದೇಶದಲ್ಲಿ ಬಾಲಕ ಬಾಲಿಕೆಯರಿಗೆ ಮತಾಚಾರಗಳ ಬೋಧ ನೆಯು ಮಾತ್ರ ಅವರವರ ಮನೆ ಮಠಗಳಲ್ಲಿ ನಡೆಯುವುದೇ ಉತ್ತಮ ವೆಂದೂ, ಸರಕಾರದ ಪಾಠಶಾಲೆಗಳಲ್ಲಿ ಸಾಮಾನ್ಯ ದೈವಭಕ್ತಿಯನ್ನೂ ಧರ್ಮಾಸಕ್ತಿಯನ್ನೂ ವೃದ್ಧಿಗೊಳಿಸಿದರೆ ಸಾಕೆಂದೂ, ತತ್ತ್ವ ರಹಸ್ಯಗಳ ಉಪದೇಶಕ್ಕೆ ಅವು ಸ್ಥಳವಲ್ಲವೆಂದೂ ರಂಗಾಚಾರ್ಯರು ಅಭಿಪ್ರಾಯ ಪಟ್ಟಿದ್ದರು. ಈ ಅಭಿಪ್ರಾಯವು ಈಗಲೂ ಗ್ರಾಹ್ಯವಾಗಿದೆ. ಸಾರ್ವ ಜನಿಕ ಪಾಠಶಾಲೆಗಳಲ್ಲಿ ಮತ ಮತಾಂತರಗಳ ಸೂಕ್ಷ್ಮ ಭೇದಗಳನ್ನು ಚರ್ಚಿಸಿ ವಿವರಿಸಹೊರಟರೆ, ಆಯಾ ಮತಾನುಯಾಯಿಗಳಲ್ಲಿ ಪರಸ್ಪರ

ವೈಷಮ್ಯಗಳು ಬೆಳೆದು, ಜನರ ಐಕಮತ್ಯಕ್ಕೆ ಭಂಗ ಬರುವುದೊಂದು ಮಾತ್ರವಲ್ಲದೆ, ನಿಜವಾದ ಧರ್ಮಜ್ಞಾನಕ್ಕೆ ಅದರಿಂದ ಬೇರೆ ಎಷ್ಟು ಮಟ್ಟಿಗೂ ಪ್ರಯೋಜನವಾಗದು. ಮತ ತತ್ತ್ವಗಳ ಸೂಕ್ಷ್ಮಾಂಶ ಗಳನ್ನು ಕಲಿಯಲು ಮತಾಚಾರ್ಯರುಗಳ ಸನ್ನಿಧಿಯೇ ತಕ್ಕ ಸ್ಥಳ. ಸರಕಾರದ ಶಾಲೆಗಳಲ್ಲಿ ಸಕಲ ಮತಗಳವರಿಗೂ ಸಾಧಾರಣವಾಗಿರ ತಕ್ಕ ನಯನೀತಿಗಳನ್ನು ಹೇಳಿಕೊಟ್ಟರೆ ಸಾಕಾಗಿರುವುದು.

ರಂಗಾಚಾರ್ಯರಿಗೆ ದೇಶಭಾಷಾ ವಿಷಯದಲ್ಲಿದ್ದ ಶ್ರದ್ಧೆಯು ಇತರರಿಗೆ ಅನುಸರಣೀಯವಾಗಿದೆ. ಅವರು ಮದರಾಸು ಪ್ರಾಂತದವ ರಾದರೂ ಇಲ್ಲಿಗೆ ಬಂದ ಬಳಿಕ—ಇತರ ವಿಷಯಗಳಲ್ಲಿ ಹೇಗೋ ಭಾಷಾ ವಿಷಯದಲ್ಲಿಯೂ ಹಾಗೆಯೇ—ಮೈಸೂರಿನವರು ನಡೆಯಬೇಕಾದಂತೆ ನಡೆಯುತ್ತಿದ್ದರು. ಅವರು ಕನ್ನಡ ವ್ಯಾಕರಣವನ್ನು ಕಲಿಯಲುಪ ಕ್ರಮಿಸಿದಾಗ ಬರೆಯಿಸಿಟ್ಟುಕೊಂಡ ಟಿಪ್ಪಣಿಗಳು (ನೋಟ್ಸ್) ಈಗಲೂ ಇವೆ. ಗ್ರಂಥ ರಚನೆಗೆ ಪ್ರೋತ್ಸಾಹಕೊಡುವುದು ಸರಕಾರದ ಮುಖ್ಯ ಕರ್ತವ್ಯಗಳಲ್ಲಿ ಒಂದೆಂದು ಅವರು ಭಾವಿಸಿದ್ದರು. ಆ ಕಾಲದ ಕವಿ ಗಳಾದ ಬಸವಪ್ಪಶಾಸ್ತ್ರಿಗಳು, ಜಯರಾಯಾಚಾರ್ಯರು ಮುಂತಾ ದವರು ತಮ್ಮ ಗ್ರಂಥಗಳ ಪೀಠಿಕೆಗಳಲ್ಲಿ ರಂಗಾಚಾರ್ಯರ ಕರ್ಣಾಟಕ ಭಾಷಾಭಿಮಾನವನ್ನು ಕೃತಜ್ಞತೆಯಿಂದ ನೆನಸಿರುವರು.

ರಂಗಾಚಾರ್ಯರು ಸಂಸ್ಕೃತ ಶಾಕುಂತಲ ನಾಟಕವನ್ನು ಬಸವಪ್ಪಶಾಸ್ತ್ರಿಗಳವರಿಂದ ಕನ್ನಡಕ್ಕೆ ಪರಿವರ್ತನೆ ಮಾಡಿಸಿ, ಅವರಿಗೆ ''ಕರ್ಣಾಟಕ ಕಾಳಿದಾಸ'' ಎಂಬ ಬಿರುದನ್ನು ಕೊಟ್ಟ ಬಗೆಯನ್ನು ಆಸ್ಥಾನ ಮಹಾವಿದ್ವಾಂಸರಾದ ಕರ್ಣಾಟಕ ಭಾಷಾರತ್ನ ಪಿ. ಆರ್. ಕರಿಬಸವಶಾಸ್ತ್ರಿಗಳವರು ಈ ರೀತಿ ವರ್ಣಿಸಿರುವರು :—

> ಶೃಂಗಾರರಕ್ಕಾಗರಂ ತಾನೆನಿಸಿ ಮೆರೆವ ಶಾಕುಂತಳಾಭಿಖ್ಯಮಾದು |
> ತ್ತುಂಗಾಲಂಕಾರಮುಂ ನಾಟಕಮನೆ ಲಸದುದ್ದಾಮ ಸಾಹಿತ್ಯಮುಂ ಮೇಣ್ ||
> ಸಂಗೀತಪ್ರೌಢಿಯುಂ ಸಂಗಳಿಸೆ ರಚಿಸಿ ಕರ್ಣಾಟವಾಗ್ಧಾಟಿಯಿಂದಂ |
> ರಂಗಾಚಾರ್ಯಾಖ್ಯ ಮಂತ್ರಿಪ್ರವರ ಸಭೆಯೊಳೊಲ್ದೋದಿದಂ ಜಾಣ್ಮೆಯಿಂದಂ ||

ಕರ್ಣಾನಂದವುದಾಗಲ್ ।
ಕರ್ಣಾಟಕ ಕಾಳಿದಾಸನೆಂಬೀ ಬಿರುದಂ ॥
ತೂರ್ಣದಿನಿತ್ತಂ ವಿದ್ವ ।
ತ್ಪೂರ್ಣಸಭಾಮಂಡಲಿಯೊಳಗಾಮಂತ್ರೀಶಂ ॥

---

# ಪರಿಚ್ಛೇದ ೯

## ಸಂಪದಭಿವೃದ್ಧಿ—ಅರ್ಥಶಾಸ್ತ್ರಪರಿಜ್ಞಾನ

ರಾಜನ್ ದುಧುಕ್ಷಸಿ ಯದಿ ಕ್ಷಿತಿಧೇನುಮೇನಾಂ
ತೇನಾದ್ಯ ವತ್ಸಮಿವ ಲೋಕಮಮುಂ ಪುಷಾಣ ।
ತಸ್ಮಿಂಶ್ಚ ಸಮ್ಯಗನಿಶಂ ಪರಿಪುಷ್ಯಮಾಣೇ
ನಾನಾಫಲಂ ಫಲತಿ ಕಲ್ಪಲತೇವ ಭೂಮಿಃ ॥

[ಎಲೈ ರಾಜನೆ, ರಾಜ್ಯವೆಂಬ ಹಸುವಿನ ಹಾಲನ್ನು ಕರೆಯಬೇಕಾದರೆ ಪ್ರಜೆಯೆಂಬ ಕರುವನ್ನು ಮೊದಲು ತೃಪ್ತಿಪಡಿಸಬೇಕು. ಜನರು ಸರ್ವದಾ ಚೆನ್ನಾಗಿ ಪರಿಪೋಷಿತರಾಗಿದ್ದಲ್ಲಿ ಭೂಮಿಯು ಕಲ್ಪವೃಕ್ಷದಂತೆ ನಾನಾ ಫಲಗಳನ್ನು ಕೊಡುವುದು.]

ರಂಗಾಚಾರ್ಯರವರು ಮೈಸೂರಿನ ಅಮಾತ್ಯಪದವಿಗೆ ಬಂದ ಕಾಲದಲ್ಲಿ ಸಂಸ್ಥಾನವು ಎಂತಹ ಸ್ಥಿತಿಯಲ್ಲಿತ್ತೆಂಬುದನ್ನು ೫ನೆಯ ಪರಿಚ್ಛೇದದಲ್ಲಿ ಸಂಕ್ಷೇಪವಾಗಿ ವಿವರಿಸಿರುವೆವು. ಆಗಿಗೆ ಹಿಂದೆ ಸುಮಾರು ಒಂದು ಶತಮಾನದಿಂದಲೂ ಮೈಸೂರಿನ ಯೋಗವು ತ್ರಾಸಿನ ತಕ್ಕಡಿಯಂತೆ ಮೇಲಕ್ಕೂ ಕೆಳಕ್ಕೂ ತೂಗಾಡುತ್ತಿತ್ತು. ರಾಜ್ಯಕ್ಷೋಭೆಗೆ ಕಾರಣವಾಗಿದ್ದ ಮುಸಲ್ಮಾನ್ ನವಾಬರ ದೌಲತ್ತು ಕೊನೆಗಂಡು, ಪುರಾತನ ರಾಜವಂಶದವರು ಪುನಃ ಸಿಂಹಾಸನವನ್ನಡರಿದಾಗ ಹಾಗಾದುದು ದೈವಸಂಕಲ್ಪವೇ ಎಂದೂ, ಅದರಿಂದ ಪ್ರಜಾಪೀಡೆಯು ಪರಿಹಾರವಾಯಿತೆಂದೂ ಜನರು ಅಂದುಕೊಂಡರು. ಆದರೆ ರಾಜರ ಆಳಿಕೆಯು ಸಮರ್ಪಕವಾಗದೆ ಹೋಯಿತು; ರಾಜ್ಯವು ಮತ್ತೊಂದಾವರ್ತಿ ನ್ಯಾಯವಾದ ಯಜಮಾನರ ಕೈತಪ್ಪಿ ಬ್ರಿಟಿಷ್ ಸರಕಾರದವರ ಕೈಸೇರಿತು. ಆ ಕಾಲದ ಬ್ರಿಟಿಷ್ ಜನರು ನ್ಯಾಯ

ಪರರೂ ಈ ದೇಶದ ವಿಷಯದಲ್ಲಿ ಅಭಿಮಾನಶಾಲಿಗಳೂ ಆಗಿದ್ದು, ಐವತ್ತು ವರ್ಷಗಳ ಕಾಲ ದೇಶವನ್ನು ಪ್ರಜಾಹಿತೈಕದೃಷ್ಟಿಯಿಂದ ಸಲಹಿದರು. ಆದರೆ ರಾಜರಿಗೆ ಮಕ್ಕಳೂ ಇಲ್ಲವಾಯಿತು. ಕರ್ಣಾಟಕ ಸಿಂಹಾಸನವು ಕರ್ತರ ವಂಶವನ್ನು ಬಿಟ್ಟು ಬ್ರಿಟಿಷರನ್ನೇ ಸೇರಬೇಕೆಂದು ಲಾರ್ಡ್ ಡಾಲ್‌ಹೌಸಿ ಎಂಬ ಗವರ್ನರ್-ಜನರಲನು ಮುಂಚಾಗಲೇ ತೀರ್ಮಾನ ಮಾಡಿದ್ದನು. ಅಷ್ಟರಲ್ಲಿ ಅನುಕೂಲ ಸನ್ನಿವೇಶಗಳು ಕೆಲವು ನಡೆದು, ರಾಜರು ದತ್ತುಸ್ವೀಕಾರ ಮಾಡಿದರು. ಅದನ್ನು ಬ್ರಿಟಿಷರೂ ಒಪ್ಪಿದರು. ಈ ರೀತಿ ಸಂಸ್ಥಾನಕ್ಕೆ ಮತ್ತೊಂದಾವರ್ತಿ ಭಾಗ್ಯೋದಯ ವಾದಂತೆ ಕಂಡಿತು. ಆದರೆ ವಿಧಿಯು ಇನ್ನೂ ಪ್ರತಿಕೂಲನಾಗಿಯೇ ಇದ್ದಕಾರಣ, "ಮಕ್ಕಳುಣ್ಣುವ ಕಾಲಕ್ಕೆ ಬರ ಬಂತು" ಎಂಬ ಗಾದೆ ಯಂತೆ, ಘೋರಕ್ಷಾಮವು ಪ್ರಾಪ್ತವಾಗಿ, ರಾಜ್ಯದ ಪ್ರಜೆಯಲ್ಲಿ ಸುಮಾರು ಕಾಲುಭಾಗವನ್ನು ಆಹುತಿ ತೆಗೆದುಕೊಂಡು, ಕೃಷಿ ಕೈಗಾರಿಕೆ ವ್ಯಾಪಾರಗಳನ್ನು ನಾಶಗೊಳಿಸಿ, ಸಂಸ್ಥಾನಕ್ಕೆ ಮಹತ್ತರ ವಾದ ಋಣಬಾಧೆಯನ್ನುಂಟುಮಾಡಿತು.

ರಂಗಾಚಾರ್ಯರು ರಾಜ್ಯಭಾರಕ್ಕೆ ಬಂದುದು ಇಂತಹ ದುಸ್ಸಂಧಿ ಯಲ್ಲಿ. ಅವರು ಸ್ವತಃ ದೇಶಾಭಿಮಾನಿಗಳೂ, ಪ್ರಜಾಹಿತೈಷಿಗಳೂ, ದೂರದೃಷ್ಟಿಯುಳ್ಳವರೂ ಆಗಿದ್ದಕಾರಣ, ಸ್ವತಃ ಸೂಕ್ಷ್ಮವಾಗಿದ್ದ ಅವರ ಪ್ರತಿಭೆಯು ಈ ಕಷ್ಟಗಳ ದೆಸೆಯಿಂದ ಮತ್ತಷ್ಟು ಸೂಕ್ಷ್ಮ ವಾಯಿತು. ಆದರೆ ಪ್ರಜೆಗಳ ಏಳಿಗೆಗಾಗಿ ತಾವು ಯೋಚಿಸಿಕೊಂಡಿದ್ದ ಕೆಲಸಗಳೆಲ್ಲವನ್ನೂ ಪೂರ್ತಿಯಾಗಿ ನಡೆಯಿಸಲು ಬೇಕಾಗಿದ್ದಷ್ಟು ದಿನ ಅವರು ಬದುಕಲಿಲ್ಲ. ಆದರೂ ಅವರು ಮಾಡಿರುವ ಕೆಲವು ಕಾರ್ಯ ಗಳು ಶಾಶ್ವತವಾಗಿ ನಿಂತಿರುವುವಲ್ಲದೆ, ಸರಕಾರವೂ ಜನರೂ ಮುಂದೆ ಮಾಡಬಹುದಾದ ಮುಖ್ಯ ಕಾರ್ಯಗಳ ಸ್ವರೂಪವೂ ಅವರಿಂದಲೇ ಸಂಗ್ರಹ ವಾಕ್ಯಗಳಲ್ಲಿ ಸೂಚಿತವಾಗಿದೆ. ಅವರು ರೈಲು ಹಾಕಿಸಿ ದುದೂ, ಪ್ರಜಾಪ್ರತಿನಿಧಿ ಸಭೆಯನ್ನು ಏರ್ಪಡಿಸಿದುದೂ, ಕೃಷಿ ಕಲಾ ವ್ಯಾಪಾರಗಳ ಅಭಿವೃದ್ಧಿಗಾಗಿ ಸಂಘಗಳನ್ನು ನಿರ್ಮಿಸಬೇಕೆಂದು ಹೇಳಿದುದೂ ದೇಶದ ಬಡತನವನ್ನು ಹೋಗಲಾಡಿಸಿ ಭಾಗ್ಯವನ್ನು

ಹೆಚ್ಚಿಸಬೇಕೆಂಬ ಆಶಯದಿಂದಲೇ. ಈ ಸಂಗತಿಗಳು ಹಿಂದೆ ವಿಸ್ತರಿಸಲ್ಪಟ್ಟಿವೆಯಾಗಿ, ಅವರು ಪ್ರಜಾಪ್ರತಿನಿಧಿ ಸಭೆಯಲ್ಲಿ ನಿರೂಪಿಸಿದ ಕೆಲವು ಅಂಶಗಳನ್ನು ಮಾತ್ರ ಈ ಕೆಳಗೆ ಕೊಟ್ಟಿರುವೆವು:—

ನಾನು ಮೇಲೆ (ಪುಟ ೬೧) ಸೂಚಿಸಿರುವಂಥಾ ಸಭೆಯ ಗಮನವನ್ನು ಪಡೆಯಲು ಯೋಗ್ಯವಾಗಿರುವ, ಲಾಭಕರವಾದ ಕೆಲವು ಕಸಬುಗಳನ್ನು ಈಗ ಹೇಳುವೆನು. ದುರ್ಭಿಕ್ಷದ ದೆಸೆಯಿಂದ ಕೈಗಾರಿಕೆ ಕುಶಲವಿದ್ಯೆಗಳವರು ತೀರಾ ಹಾಳಾಗಿಹೋಗಿರುವರೆಂಬ ಸಂಗತಿಯನ್ನು ಹಿಂದೆಯೇ ವಿವರಿಸಿದ್ದೇನೆ. ನೋಟಕ್ಕೆ ಅಂದವಾದ ಚಮತ್ಕಾರದ ಕಲೆಗಳು ಕೈಗೆಲಸದಿಂದಲೇ ಅಭಿವೃದ್ಧಿಗೆ ಬರಬಹುದು. ಆದರೆ ಸಾಮಾನ್ಯ ಜನರಿಗೆಲ್ಲಾ ಆವಶ್ಯಕವಾದ ಸಾಮಾನುಗಳನ್ನೊದಗಿಸುವ ಕಸಬುಗಳು ಈ ಕಾಲದಲ್ಲಿ ಯಂತ್ರಸಹಾಯವಿಲ್ಲದಿದ್ದರೆ ಪರದೇಶಗಳೊಡನೆ ಪಂಥ ಹಾಕಿ ನಿಲ್ಲಲಾರವು.

ಈ ದೇಶದಲ್ಲಿ ಅರಳೆಯ ಬೆಳೆಯು ಕಡಿಮೆಯಾದ ಕಾರಣ ದೊಡ್ಡ ದೊಡ್ಡ ಹತ್ತಿಯ ಕಾರ್ಖಾನೆಗಳು ಬಹುವಾಗಿರುವುದಕ್ಕೆ ಅನುಕೂಲವಿಲ್ಲ. ಆದರೂ ಕೆಲವು ಕಾರ್ಖಾನೆಗಳಿಗೆ ಅವಕಾಶವುಂಟು.

ಉಣ್ಣೆಗಾಗಿ ಕುರಿಗಳನ್ನು ಸಾಕುವುದೂ, ಉಣ್ಣೆಯ ಬಟ್ಟೆಗಳನ್ನು ನೆಯ್ಯುವುದೂ ಈ ಸಂಸ್ಥಾನಕ್ಕೆ ಬಹುಕಾಲದಿಂದ ಬಂದಿರುವ ಕಸಬು. ಯಂತ್ರ ಸಾಧನಗಳಿಂದ ಅದಕ್ಕೆ ತುಂಬಾ ಪ್ರಯೋಜನವುಂಟು.

ಕಾಗದದ ಕಾರಖಾನೆಯನ್ನಿಡಬೇಕೆಂಬ ಸಲಹೆಯೂ ಒಂದುಂಟು. (ಮೇಲೆ ಹೇಳಲ್ಪಟ್ಟಿರುವ) ಸಭೆಯು ಈ ವಿಷಯಗಳಿಗೆ ಲಕ್ಷ್ಯಕೊಡುವುದರಿಂದ ಉಪಯೋಗವುಂಟು.

ಹೊರಕ್ಕೆ ರಫ್ತುಮಾಡಬಹುದಾದ ಮತ್ತು ಬೆಲೆಬಾಳುವ ಧಾನ್ಯಗಳ ಪೈರು ಮರಗಳನ್ನು ಸಾಗುವಳಿಮಾಡುವುದರಲ್ಲಿ ಅಭಿವೃದ್ಧಿಗೆ ಬೇಕಾದಷ್ಟು ಅವಕಾಶವಿದೆ. ಇವುಗಳಲ್ಲಿ ಬಹು ಮುಖ್ಯವಾದುದು ಕಾಫಿಯೊಂದು; ಮತ್ತೊಂದು ಸಿಂಕೋನ.

ಹತ್ತಿಯನ್ನೂ, ಈಗೀಗ ರಫ್ತು ಪದಾರ್ಥಗಳಲ್ಲಿ ಮುಖ್ಯವಾಗುತ್ತಿರುವ ಗೋಧಿಯನ್ನೂ ಬೆಳೆಯಲು ತಕ್ಕ ಜಮೀನುಗಳು ಸ್ವಲ್ಪವೇ ಇವೆ. ಆದರೆ ಆ ಜಮೀನುಗಳಲ್ಲಿ ಈಗ ಬೆಳೆಯಾಗುತ್ತಿರುವ ಸಾಮಾನ್ಯ ಧಾನ್ಯಗಳನ್ನು ಹೊರಗಿನಿಂದ ರೈಲು ಮೂಲಕ ಅಗ್ಗವಾಗಿ ತರಿಸಿಕೊಂಡರೆ, ಅವುಗಳಲ್ಲಿ ಈ ಬೆಲೆಯಾಗುವ (ಗೋಧಿ ಮೊದಲಾದ) ಬೆಳೆಗಳನ್ನಿಡಬಹುದು. ಕಬ್ಬಿನ ಬೆಳೆಯು ಬಹುಕಾಲದಿಂದಲೂ ಇರತಕ್ಕುದು. ಅದರ

ಬೆಲೆಗೂ ಬತ್ತದ ಬೆಲೆಗೂ ಇರುವ ವ್ಯತ್ಯಾಸಕ್ಕನುಸಾರವಾಗಿ ಅದರ ವ್ಯವಸಾಯವು ಹರಡಬೇಕು.

ಸಂಸ್ಥಾನದ ಕಸಬುಗಳಲ್ಲಿ ಅತಿಮುಖ್ಯವಾದುದು ರೇಷ್ಮೆಯ ಕೆಲಸ. ಹಿಪ್ಪಲಿ ನೇರಳೆಯ ಗಿಡಗಳ ವ್ಯವಸಾಯದಲ್ಲಿದ್ದ ಜಮೀನುಗಳಿಗೆ ಇದುವರೆಗೂ ಹೆಚ್ಚು ಕಂದಾಯ ಹಾಕಿತ್ತು. ರೇಷ್ಮೆಯ ಹುಳಗಳೂ ಹೀನದೆಶೆಗೆ ಬಂದಿದ್ದ ಕಾರಣ ಆ ಕಸಬು ಮುಪ್ಪಾಗ ಮುವ್ವೀಸ ಪಾಲು ನಾಶವಾಗಿತ್ತು. ಅದೃಷ್ಟವಶಾತ್ ಈಗ ವಾಯುಗುಣವು ಅನುಕೂಲ ವಾಗಿರುವುದರಿಂದ ಅದು ಚೇತರಿಸಿಕೊಳ್ಳುತ್ತಿದೆ. ಈ ವಿಚಾರವನ್ನು (ಮೇಲೆ ಹೇಳಿದ) ಸಭೆಯು ಪರಿಶೀಲಿಸಿ, ಮುಂದೆ ಹೀಗಾಗದಂತೆ ಮಾಡುವುದಕ್ಕೂ, ಈ ಕಸಬನ್ನು ಸಾಧ್ಯ ವಾದಷ್ಟು ಮಟ್ಟಿಗೂ ಹರಡುವುದಕ್ಕೂ ಪ್ರಯತ್ನಿಸಬೇಕು.

ಇಷ್ಟೆಲ್ಲಾ ಹೇಳಿದಮೇಲೆ,—ಜನರ ಕಷ್ಟದಿಂದ ಅವರ ಜೀವನ ಕಳೆದು ಇನ್ನೂ ಮಿಗುವಷ್ಟು ಮಟ್ಟಿಗೆ ಉತ್ಪತ್ತಿಯಾದ ಹೊರತು ದೇಶದ ಅಭಿವೃದ್ಧಿಯು ಖಂಡಿತವಲ್ಲ ವೆಂಬ ಮುಖ್ಯ ತತ್ತ್ವವನ್ನು ನಾನು ನಿಮಗೆ ತಿಳಿಸದಿರಲಾಗದು. ಎದುವರೆಗೂ ಬೇಸಾಯ ಗಾರರ ಕಷ್ಟದಿಂದ ಅವರ ಆಹಾರ ಮಾತ್ರ ದೊರೆಯುವುದೇ ಪ್ರಯಾಸವಾಗಿರುವುದೋ, ಅದುವರೆಗೂ ಕ್ಷಾಮ ಅಥವಾ ಮತ್ತೇನಾದರೂ ವಿಪತ್ತು ಬಂದರೆ ಅವರು ಅದಕ್ಕೆ ಬಲಿಯಾಗಿ ಬೀಳುವುದನ್ನು ತಪ್ಪಿಸಲಾಗುವುದಿಲ್ಲ. ಇದನ್ನು ಹೋಗಲಾಡಿಸಬೇಕಾದರೆ ದೇಶದ ಕಸಬುಗಳಲ್ಲಿ ದೇಹಶ್ರಮವನ್ನು ಕಡಿಮೆಮಾಡಿಕೊಂಡು ಯಂತ್ರೋಪಕರಣಗಳನ್ನು ಹೆಚ್ಚಾಗಿ ಉಪಯೋಗಿಸಬೇಕು. ನೀರಾವರಿಯ ಕೆಲಸಗಳಿಂದ ಇದು ಸ್ವಲ್ಪ ಮಟ್ಟಿಗೆ ನೆರವೇರುವುದು. ಆದರೆ ಹೆಚ್ಚು ವಿಸ್ತೀರ್ಣವುಳ್ಳ ಖುಷ್ಕಿ ಜಮೀನುಗಳಲ್ಲಾಗುವ ಉತ್ಪತ್ತಿಯು ರೈತನ ಮತ್ತು ಅವನ ಸಂಸಾರದ ಆಹಾರಕ್ಕೇ ಸಾಲದೆಂಬಂತೆ ಇರುವುದು. ಕೂಲಿ ಕೈಗಾರಿಕೆಗಳವರ ಪಾಡು ಇನ್ನೂ ಕಷ್ಟ. ಇದುವರೆಗೂ ದೇಶದಲ್ಲಿ ಬಡ್ಡಿಯ ದರವು ಅಧಿಕವಾಗಿದ್ದುದರಿಂದಲೂ, ಕೂಲಿಗಾರರು ಅಗ್ಗವಾಗಿದ್ದುದರಿಂದಲೂ, ಭಾರೀ ಬೆಲೆಯ ಯಂತ್ರಸಾಧನಗಳನ್ನುಪಯೋಗಿಸುವುದು ಅನುಕೂಲವಾಗಿರಲಿಲ್ಲ. ಈಗ ಇಂಗ್ಲಿಷ್ ಬಂಡವಾಳವು ಈ ದೇಶಕ್ಕೆ ಸುಲಭ ದರಗಳಲ್ಲಿ ಬರುತ್ತಿದೆ. ಕ್ಷಾಮದ ದೆಸೆಯಿಂದ ಕೂಲಿಯ ಜನರ ಸಂಖ್ಯೆಯು ಕಡಿಮೆಯಾಗಿದೆ. ಆದಕಾರಣ ಹೆಚ್ಚು ಬಂಡವಾಳ ಹಾಕಿ, ಕಸಬು ಕಾರ್ಖಾನೆಗಳೊಳಗೆ ನವೀನ ಯಂತ್ರಗಳನ್ನು ಹೂಡಿ, ಆ ಮೂಲಕ ಜನರ ಜೀವನ ಸ್ಥಿತಿ ಯನ್ನು ಉನ್ನತಿಗೊಳಿಸಲು ಇದು ಅನುಕೂಲ ಕಾಲ. ಸಂಸ್ಥಾನದಲ್ಲಿಯೂ ಪಕ್ಕದಲ್ಲಿರುವ ಬ್ರಿಟಿಷ್ ಭಾಗಗಳಲ್ಲಿಯೂ ಕ್ಷಾಮದಲ್ಲಿ ವ್ಯವಸಾಯ ತಪ್ಪಿದ ಒಳ್ಳೆಯ ಜಮೀನುಗಳು ಬೇಕಾದಷ್ಟಿವೆ. ಅವುಗಳಲ್ಲಿ ಆವಿಯ ಶಕ್ತಿಯಿಂದುಳುವ ನೇಗಿಲು(ಸ್ಟೀಮ್ ಪ್ಲೋ)

ಗಳನ್ನೂ ಇತರ ಯಂತ್ರಗಳನ್ನೂ ಉಪಯೋಗಿಸಿ ಹೊರಕ್ಕೆ ರಫ್ತಾಗುವ ಸರಕುಗಳನ್ನೂ ಬೆಳೆಯಲು ತುಂಬಾ ಅವಕಾಶವಿದೆ. ಹೀಗೆ ಯಂತ್ರ ಸಾಧನಗಳಿಂದ ಇದ್ದಕ್ಕಿದ್ದಂತೆಯೇ ಬೇಸಾಯವನ್ನೂ ಕಾರ್ಖಾನೆಗಳನ್ನೂ ಹೆಚ್ಚಿಸುವುದರಿಂದ ಜನಸಂಖ್ಯಾ ವೃದ್ಧಿಯು ವಿಪರೀತವೆಂದು ತೋರಿ ಬರದೆ, ಕೂಲಿಯ ದರವು ಹೆಚ್ಚಿ, ಕೂಲಿಯವನ ಸ್ಥಿತಿಯು ಉತ್ತಮಗೊಳ್ಳುವುದು. ಈಗಲಾದರೋ ದೇಶದಲ್ಲಿ ವಸ್ತುಗಳ ಉತ್ಪತ್ತಿಗಿಂತಲೂ ಪ್ರಜೋತ್ಪತ್ತಿಯೇ ಹೆಚ್ಚಾಗುತ್ತಲಿದೆ. ದಿನೇ ದಿನೇ ಬಡತನವೂ ಕಷ್ಟವೂ ಹೆಚ್ಚುವುದೇ ಇದಕ್ಕೆ ತಪ್ಪದೆ ಉಂಟಾಗತಕ್ಕ ಫಲ.

ಒಟ್ಟುಗೂಡಿದರೆ ದೊಡ್ಡ ಬಂಡವಾಳವಾಗುವಂಥಾ ಸಣ್ಣ ಸಣ್ಣ ಮೊಬಲಗುಗಳು ಸಂಸ್ಥಾನದಲ್ಲಿ ಈಗ ಉಪಯೋಗವಿಲ್ಲದೆ ಬಿದ್ದಿವೆ. ಅವುಗಳನ್ನು ಮೇಲೆ ಹೇಳಿದ ಉದ್ದೇಶಗಳಿಗೆ ಉಪಯೋಗಿಸಬಹುದು. ಆದರೆ ಸರಕಾರೀ ಕೆಲಸಗಳಿಗೆ ಈ ದೇಶದಲ್ಲಿ ವಿಪರೀತ ಪ್ರಾಶಸ್ತ್ಯ ಬಂದಿದೆ. ಐಶ್ವರ್ಯವೂ ಬುದ್ಧಿಕುಶಲತೆಯೂ, ಸರಕಾರದ ಚಾಕರಿ ಅಥವಾ ಇತರ ಲಾಭಕರವಲ್ಲದ ಉದ್ಯೋಗಗಳಿಗೆ ಉಪಯುಕ್ತವಾಗುವುದಕ್ಕೆ ಪ್ರತಿಯಾಗಿ, ಸಂಪದಭಿವೃದ್ಧಿಕರವಾದ ಕಸಬುಗಳಿಗೇ ಉಪಯೋಗಿಸಲ್ಪಡುವಂತೆ ಜನರಿಗೆ ಪ್ರೋತ್ಸಾಹವಾಗಬೇಕು.

ಸರಕಾರದ ನೌಕರರು ತಾವು ಕೂಡಿಡುವ ಹಣವನ್ನು ಈಗ ಭೂಮಿಯ ಮೇಲೆ ಹಾಕುತ್ತಿರುವರು. ಆದರೆ ಭೂಮಿಯನ್ನು ಕೊಂಡುಕೊಳ್ಳುವರೇ ವಿನಾ, ಬೇಸಾಯವನ್ನು ಉತ್ತಮಪಡಿಸಲು ವೆಚ್ಚಮಾಡುವುದಿಲ್ಲ.

ಕಾಲಕಾಲಕ್ಕೆ ಮಳೆಗಳು ಬೀಳದಿರುವುದು ಈ ಸಂಸ್ಥಾನಕ್ಕೆ ಸಾಧಾರಣವಾಗಿದೆ. ಕಳೆದ ಕ್ಷಾಮದಿಂದ, ಪ್ರಜೆಗಳ ಸಾಹಾಯ್ಯ ಮಾತ್ರವಲ್ಲದೆ, ಬಹು ದ್ರವ್ಯ ವ್ಯಯವಾದರೂ ಸರಕಾರದಿಂದ ಕ್ಷಾಮನಿವಾರಣೆಯಾಗುವುದು ಅಸಾಧ್ಯವೆಂದು ಗೊತ್ತಾಗಿರುವುದು. ನೀರಾವರಿಯ ಕಾಂಗಾರಿಗಳಿಗೆ ಸರಕಾರದವರು ತಕ್ಕಂತೆ ಲಕ್ಷ್ಯಕೊಡುವರು. ಆದರೂ ಜೀವನದಿಗಳ ಕಾಲುವೆಗಳ ವಿನಾ ಮಿಕ್ಕೆಡೆಗಳಲ್ಲಿ ಮಳೆಯಿಲ್ಲದಾಗ ಅವುಗಳಿಂದ ಉಪಯೋಗವಿಲ್ಲ. ಆಹಾರಸಾಮಗ್ರಿಗಳನ್ನು ಸಾಗಿಸುವುದಕ್ಕಾಗಿ ಲೋಹಮಾರ್ಗಗಳನ್ನು ಕಲ್ಪಿಸಬೇಕೆಂದು ಸರಕಾರದವರು ಆಲೋಚಿಸುತ್ತಿರುವರು. ಊಟೆಗಳಿರುವ ಸ್ಥಳಗಳಲ್ಲಿ ಹೆಚ್ಚಾಗಿ ಬಾವಿಗಳನ್ನಗಿಯುವುದಕ್ಕಾಗಿ ರೈತರಿಗೆ ಹಣವನ್ನು ಮುಂಗಡವಾಗಿ ಕೊಡಬೇಕೆಂದೂ ಯೋಚಿಸುತ್ತಿರುವರು. ಮೇಲೆ ಹೇಳಿದಂತೆ ಭೂವ್ಯವಸಾಯದಲ್ಲಿ ಹೆಚ್ಚು ಬಂಡವಾಳವನ್ನೂ ಯಂತ್ರಗಳನ್ನೂ ಉಪಯೋಗಿಸುವುದಕ್ಕೆ ಸರಕಾರದವರು ಉತ್ತೇಜನ ಕೊಡುವರು. ಆದರೆ ಜನರು ಆಪತ್ಕಾಲಕ್ಕಾಗಿ ಧಾನ್ಯವನ್ನು ದಾಸ್ತಾನಮಾಡಿಟ್ಟು

ಕೊಳ್ಳುವುದು ಬಹು ಮುಖ್ಯ. ಶ್ರೀಮನ್ ಮಹಾರಾಜರವರ ವಿಶೇಷಾಜ್ಞೆಯಂತೆ ನಿಮಗೂ ನಿಮ್ಮ ಮುಖಾಂತರ ಇತರ ಜನರಿಗೂ ನಾನು ಉದ್ಘೋಷಿಸಿ ಹೇಳುವುದೇನೆಂದರೆ,—ಪ್ರತಿಯೊಬ್ಬ ಬೇಸಾಯಗಾರನೂ, ತನಗೂ ತನ್ನ ಕುಟುಂಬಕ್ಕೂ ಒಂದೆರಡು ವರ್ಷಗಳಿಗಾಗುವಷ್ಟು ಕಾಳುಕಡ್ಡಿಗಳನ್ನು ಉಗ್ರಾಣದಲ್ಲಿಟ್ಟಿರಬೇಕೆಂಬ ಅತ್ಯಾವಶ್ಯವಾದ ಮತ್ತು ಗುರುತರವಾದ ಕರ್ತವ್ಯವನ್ನು ಮರೆಯಬಾರದು. ಹೊರದೇಶದಲ್ಲಿ ವಿಶೇಷ ಬೆಲೆಯಾಗದೆ, ಬಹು ದಿನಗಳವರೆಗೂ ಕೆಡದೆ ಇರತಕ್ಕ ಧಾನ್ಯವಾದ "ರಾಗಿ"ಯು ಈ ವಿಷಯದಲ್ಲಿ ತುಂಬಾ ಅನುಕೂಲವಾದುದು.

ರೈತರು ಜಾಗರೂಕತೆಯಿಂದ ನಡೆಸಿದರೆ ಚಿಕ್ಕ ಚಿಕ್ಕ ಅನಾವೃಷ್ಟಿಗಳಲ್ಲಿ ಸಹಾಯಕ್ಕೆ ಬರುವ ಉಪಾಯವು ಮತ್ತೊಂದುಂಟು. ಆಳವಾಗಿ ಉಳುವುದರಿಂದ ನೆಲದಲ್ಲಿ ತೇವವು ಹೆಚ್ಚು ಕಾಲ ನಿಂತು, ಮಳೆಗಳು ಹಿಂದೆಗೆದಾಗ ಬೆಳೆಗಳಿಗೆ ಆಧಾರವಾಗುವುದು. ಇದಕ್ಕೆ ಸಂಬಂಧಪಟ್ಟ ಸಂಗತಿಗಳನ್ನು ಅನುಭವದಿಂದ ನಿಶ್ಚಯಿಸಬೇಕು. ಆದರೂ ಈ ಸಂಸ್ಥಾನದ ಕೆಮ್ಮಣ್ಣುಳ್ಳ ಮತ್ತು ಕರಿಯ ಮಣ್ಣುಳ್ಳ ಜಮೀನುಗಳಲ್ಲಿ ಆಳವಾಗಿ ಉಳುವುದರಿಂದ ಪ್ರಯೋಜನವಾಗುವುದು ಖಂಡಿತ. ಅದಕ್ಕೆ ತಕ್ಕ ನೇಗಿಲುಗಳನ್ನು ಈ ದೇಶದಲ್ಲಿಯೇ ಮಾಡಿಸಿ ಸುಲಭ ಬೆಲೆಗೆ ದೊರಕಿಸಲು ಏರ್ಪಾಡುಗಳು ನಡೆಯಿಸಲ್ಪಡುವುವು. ನೀವುಗಳು ಅವುಗಳನ್ನು ವಾಡಿಕೆಗೆ ತರುವಿರೆಂದು ಮಹಾರಾಜರ ಸರಕಾರದವರು ನಂಬಿರುವರು. [—೭ನೆಯ ಅಕ್ಟೋಬರ್ ೧೮೮೧.]

ಸಂಸ್ಥಾನದಲ್ಲಿ ಕೃಷಿ ಕಾರ್ಖಾನೆಗಳಲ್ಲಿರುವ ಜನರು ತಾವಾಗಿ ಅಭಿವೃದ್ಧಿಹೊಂದಬೇಕೆಂಬ ಅಭಿಲಾಷೆಯಿಂದ ಕೂಡಿದವರಾಗಿರುವಾಗ ಅವರು ತಮ್ಮ ತಮ್ಮ ಕಸಬುಗಳಲ್ಲಿ ತಾವು ತಾವೇ ಎಷ್ಟು ಮಾಡಿಕೊಳ್ಳಬಹುದೋ ಅದನ್ನು, ಸರಕಾರವಾಗಲಿ ಅಥವಾ ಹೊರಗಿನಿಂದ ಬಂದ ಕೆಲವರಾಗಲಿ ಅವರಿಗೆ ಮಾಡಬಹುದಾದ ಉಪಕಾರದೊಡನೆ ಹೋಲಿಸಿ ನೋಡಿದರೆ, ಅವು ಕ್ರಮವಾಗಿ ಆನೆ ಸೊಳ್ಳೆಗಳಂತೆ ಇರುವುವೆಂದು ನಾನು ಪುನಃ ಜ್ಞಾಪಕಪಡಿಸಬೇಕಾಗಿದೆ. ಸುತ್ತುಮುತ್ತಲೂ ಎಲ್ಲೆಲ್ಲಿಯೂ ಪ್ರಪಂಚವು ಆಶ್ಚರ್ಯಕರವಾದ ರೀತಿಯಲ್ಲಿ ಮುಂದೆ ಸಾಗುತ್ತಿರುವಾಗ, ಈ ದೇಶದ ೨೦ ಕೋಟಿ ಜನರು ಮಾತ್ರ ೨,೦೦೦ ವರ್ಷಗಳ ಹಿಂದಿನ ತಮ್ಮ ಪೂರ್ವಿಕರ ನಡತೆಗಳನ್ನೇ ಅನುಸರಿಸಿಕೊಂಡು, ದುಃಖ ಜೀವಿಗಳಾಗಿ ದುರ್ಭಿಕ್ಷದ ಅಥವಾ ಮತ್ತಾವುದಾದರೊಂದು ಆಪತ್ತಿನ ಮೊದಲನೆಯ ಪೆಟ್ಟಿಗೇ ಮಲಗುವವರಾಗಿ, ತಮ್ಮ ದೀರ್ಘಕಾಲದ ನಿದ್ದೆಯಲ್ಲಿಯೇ ಇನ್ನು ಬಹು ದಿನಗಳಿರಲಾಗದು. ಯೂರೋಪ್ ಖಂಡದಲ್ಲಿ ನೀರಿನ ಹಬೆಯ ಯಂತ್ರವನ್ನು ಕಾರ್ಖಾನೆಗಳಲ್ಲಿ ಉಪಯೋಗಕ್ಕೆ ತಂದುದು ಈ ಶತಾಬ್ದದ ಆದಿಯಲ್ಲಿಯೇ. ಆಗ ಇಂಡಿಯಾದೇಶವು ಇಂಗ್ಲೆಂಡಿಗೆ ಬಟ್ಟೆ

ಗಳನ್ನು ರಫ್ತು ಮಾಡುತಲಿತ್ತು. ಈಗ ಇಂಗ್ಲೆಂಡು ದೇಶವು—ಯುರೋಪಿನ ಇತರ ದೇಶಗಳೊಡನೆಯೂ ಅಮೆರಿಕದೊಡನೆಯೂ ಹೋರಾಡುತ್ತಿದ್ದರೂ,—ಪ್ರಪಂಚದ ಬಹು ಭಾಗಗಳಿಗೆ ಬಟ್ಟೆಗಳನ್ನೂ ಇತರ ಪದಾರ್ಥಗಳನ್ನೂ ಒದಗಿಸುತ್ತಲಿದೆ. ಇದಕ್ಕೆ ಕಾರಣವು ಯಾರಾದರೂ ಒಬ್ಬರಿಬ್ಬರು ಆಕಸ್ಮಾತ್ತಾಗಿ ಮಹೋಪಾಯಗಳನ್ನು ಅಥವಾ ಮಹಾ ರಹಸ್ಯಗಳನ್ನು ನೂತನವಾಗಿ ಕಂಡುಹಿಡಿದುದಲ್ಲ ; ಆ ದೇಶದ ಜನಸಾಮಾನ್ಯದಲ್ಲಿ ಪ್ರತಿಯೊಬ್ಬನೂ ತಾನು ಮಾಡುವ ಸಣ್ಣ ಕೆಲಸದಲ್ಲಿ ಬುದ್ಧಿಯನ್ನುಪಯೋಗಿಸಿ, ಚಿಕ್ಕ ಚಿಕ್ಕ ವಿಷಯಗಳನ್ನು ಕಂಡು ತಿಳಿದುಕೊಂಡು, ದಿನೇ ದಿನೇ ತನ್ನ ಕಸಬನ್ನು ಸ್ವಲ್ಪ ಸ್ವಲ್ಪವಾಗಿ ಉತ್ತಮಪಡಿಸಲು ಯತ್ನಿಸಿದುದರಿಂದ ಅದೆಲ್ಲವೂ ಒಟ್ಟುಗೂಡಿ ಇಷ್ಟು ಸಂಪತ್ತಿಗೂ ಅಭ್ಯುದಯಕ್ಕೂ ಕಾರಣವಾಯಿತು.

ಈ ದೇಶದ ಜನರೂ ಅದೇ ಪ್ರಕಾರವಾಗಿ ಅಭಿವೃದ್ಧಿಯ ಮಾರ್ಗದಲ್ಲಿ ನಡೆಯಲು ಮೊದಲುಮಾಡಿದರೆ ಏನುತಾನೆ ಅಸಾಧ್ಯವಾಗಿದ್ದೀತು ? ಇಂಡಿಯಾದೇಶದ ರಾಜ್ಯ ತಂತ್ರಜ್ಞರ ಮುಂದಿರುವ ದೊಡ್ಡ ಪ್ರಶ್ನೆಯೇನೆಂದರೆ :—"ಪ್ರಜೆಗಳನ್ನು ಕುಗ್ಗಿಸುವ ಅಧಿಕಾರಿವಶವರ್ತಿತ್ವದಿಂದ ಅವರನ್ನು ಬಿಡಿಸಿ, ಕೃಷಿ ಕಲಾ ವಾಣಿಜ್ಯಗಳಲ್ಲಿ ಅವರು ಮುಂದೆ ಬಂದು ಅಭಿವೃದ್ಧಿಹೊಂದುವ ಹಾಗೆ ಮಾಡುವುದಕ್ಕೆ ಏನುಪಾಯ ?" ಎಂಬುದು. ಈ ವಿಷಯದಲ್ಲಿ ತಮ್ಮ ಕೈಯಿಂದಾಗುವುದನ್ನು ಮಾಡಲು ಮಹಾರಾಜರ ಸರಕಾರವು ಆತುರಗೊಂಡಿದೆ. ಆದರೆ ಈಗ ಪ್ರಜಾಪ್ರತಿನಿಧಿ ಸಭೆಗಳ ಮತ್ತು ಸ್ವರಾಜ್ಯದ ಕಾಲವು ಹುಟ್ಟಿ, ನಮ್ಮ ಜನಪದದಲ್ಲಿ ಹೊಸ ಜೀವನ ಕಳೆಯನ್ನು ತುಂಬಲು ಮೊದಲು ಮಾಡಿರುವ ಕಾರಣ, ಪ್ರಜಾಪ್ರತಿನಿಧಿಗಳಾದ ತಾವುಗಳು ಈ (ಮೇಲೆ ಹೇಳಿರುವ) ಅಭಿಪ್ರಾಯಗಳನ್ನು ಜನರಲ್ಲಿ ಹರಡಿ, ಅವರನ್ನು ಸ್ವಪ್ರಯೋಜನದ ಮತ್ತು ಸ್ವಗೌರವದ ವಿಷಯಗಳಲ್ಲಿ ಎಚ್ಚರಿಸುವಿರೆಂದು ಸರಕಾರವು ನಿರೀಕ್ಷಿಸುತ್ತದೆ. [—೨೬ನೆಯ ಅಕ್ಟೋಬರ್ ೧೮೮೩.]

ಈ ಮೇಲಿನ ಉಪನ್ಯಾಸಗಳಿಂದ ರಂಗಾಚಾರ್ಯರಿಗೆ ಅರ್ಥಶಾಸ್ತ್ರದಲ್ಲಿ—ಎಂದರೆ ದೇಶದ ಸಂಪತ್ತಿಗೆ ಸಂಬಂಧಪಟ್ಟ ವಿಚಾರದಲ್ಲಿ, ಇದ್ದ ಪರಿಜ್ಞಾನವೂ ರೈತರಲ್ಲಿದ್ದ ಅಭಿಮಾನವೂ ವ್ಯಕ್ತವಾಗುವುವು. ಇಂತಹ ಸಮಯೋಚಿತವಾದ ಹಿತೋಕ್ತಿಗಳನ್ನು ನಮ್ಮವರಿಗೆ ಹೇಳಿರುವವರು ವಿರಳವಾಗಿರುವರು. ರಂಗಾಚಾರ್ಯರವರ ಅಭಿಪ್ರಾಯಗಳು ಶಾಸ್ತ್ರಜ್ಞರಿಗೂ ಸಾಮಾನ್ಯ ಜನರಿಗೂ ಸಮ್ಮತವಾಗತಕ್ಕವು. ಅವುಗಳಲ್ಲಿ ಮುಖ್ಯವಾದುವು ಯಾವುವೆಂದರೆ :—(೧) ಜನರು ಸರಕಾರದ

ನೌಕರಿಗಳಿಗೆ ವಿಶೇಷ ನುಗ್ಗಬಾರದು. (೨) ಹಣವನ್ನು ಹೂತಿಡಬಾರದು, ಬಡ್ಡಿಯಾಶೆಗೆ ಸಾಲಕೊಡಬಾರದು, ಬ್ಯಾಂಕಿನಲ್ಲಿ ಕುಪ್ಪೆಹಾಕಬಾರದು ; ವ್ಯಾಪಾರದಲ್ಲಿಯೂ, ವ್ಯವಸಾಯ ಕೈಗಾರಿಕೆಗಳಲ್ಲಿಯೂ ಉಪ ಯೋಗಿಸಬೇಕು. (೩) ರೈತರೂ ಕೈಗೆಲಸಗಳವರೂ ಧಾನ್ಯ ಸಾಮಗ್ರಿ ಯನ್ನು, ನಗದು ಹಣದ ಆಸೆಯಿಂದ ಮಾರಿಬಿಡದೆ, ಒಂದೆರಡು ವರ್ಷ ಕ್ಕಾಗುವ ಮಟ್ಟಿಗಾದರೂ ಕಣಜದಲ್ಲಿ ಯಾವಾಗಲೂ ಕೈಗಾವಲಾಗಿ ಇಟ್ಟುಕೊಂಡಿರಬೇಕು. (೪) ಬೇಸಾಯಗಾರರು ವಿಜ್ಞಾನ ಶಾಸ್ತ್ರಗಳ ವಿಷಯಗಳನ್ನು ತಿಳಿದುಕೊಂಡು, ಹೊಸ ಹೊಸ ಪದ್ಧತಿಗಳನ್ನು ರೂಢಿಗೆ ತಂದು, ವಿಧವಿಧವಾದ ಬೆಳೆಗಳನ್ನಿಡಬೇಕು. (೫) ರೈತರೂ, ಕೈಗೆಲಸಗಳವರೂ, ಕೂಲಿಯವರೂ—ಎಲ್ಲರೂ ತಕ್ಕಂತೆ ವಿದ್ಯೆ ಕಲಿಯ ಬೇಕು. (೬) ಅವರು ಸಂಘಗಳನ್ನೇರ್ಪಡಿಸಿಕೊಂಡು ಪರಸ್ಪರ ಸಹಾಯಕ ರಾಗಿ, ಅಧಿಕಾರಿಗಳ ದಾಂಧಲೆಯನ್ನು ತಪ್ಪಿಸಿಕೊಂಡು ಅಭಿವೃದ್ಧಿ ಪಡೆಯಬೇಕು.

ರಂಗಾಚಾರ್ಯರು ಬ್ರಿಟಿಷರ ಆಳಿಕೆಯ ಮೇಲೆ ಮಾಡಿದ ಆಕ್ಷೇಪಣೆ ಯಲ್ಲಿ, ಜನರ ಸಾಮಾಜಿಕಾಭಿವೃದ್ಧಿಯು ಅವರಿಂದ ತಕ್ಕಷ್ಟು ಆಗಲಿಲ್ಲ ವೆಂದು ಹೇಳಿದ್ದರಷ್ಟೆ. ಸಾಮಾಜಿಕಾಭ್ಯುದಯವೆಂದರೆ ವಿದ್ಯಾ ಪ್ರಾಚುರ್ಯ, ಗ್ರಂಥಾಭಿವೃದ್ಧಿ, ಭಾಗ್ಯಾಭಿವೃದ್ಧಿ, ಪ್ರಜೆಗಳ ಬುದ್ಧಿ ಕುಶಲತೆಯೂ ಚಾಕಚಕ್ಯವೂ ಉದ್ಯೋಗಶೀಲತೆಯೂ ಹೆಚ್ಚುವಿಕೆ— ಇವೆಲ್ಲವೂ ಸೇರಿ ಆಗುವ ಜನಜೀವನೋನ್ನತಿ. ಈ ಉದ್ದೇಶವನ್ನು ರಂಗಾಚಾರ್ಯರು ಎಂದೂ ಮರೆತಿರಲಿಲ್ಲವೆಂಬುದು ನಾವು ಹಿಂದೆ ನೋಡಿರುವ ಸಂಗತಿಗಳಿಂದಲೂ ಉದಾಹರಿಸಿರುವ ಉಪನ್ಯಾಸ ಗಳಿಂದಲೂ ಸ್ಪಷ್ಟವಾಗಿದೆ.

ದೇಶದಲ್ಲಿ ವೈಜ್ಞಾನಿಕ ಯಂತ್ರೋಪಕರಣಗಳನ್ನು ಹೂಡಿ ಅವುಗಳ ಮೂಲಕ ಸಂಪದಭಿವೃದ್ಧಿಪಡಿಸುವ ವಿಚಾರದಲ್ಲಿ ರಂಗಾಚಾರ್ಯರಿ ಗಿದ್ದ ಶ್ರದ್ಧಾಸಕ್ತಿಗಳಿಗೆ ಇನ್ನೂ ಒಂದೆರಡು ದೃಷ್ಟಾಂತಗಳನ್ನು ಕೊಡಬಹುದು.

ಮೈಸೂರಿಗೆ ವಿದ್ಯುಚ್ಛಕ್ತಿ (ಎಲೆಕ್ಟ್ರಿಸಿಟಿ)ಯ ಪರಿಚಯವನ್ನು ಮೊಟ್ಟಮೊದಲು ಉಂಟುಮಾಡಿಕೊಟ್ಟವರು ರಂಗಾಚಾರ್ಯರೇ. ಅವರು ಅರಮನೆಗೆ "ಡೈನಮೊ" ಎಂಬ ವಿದ್ಯುಜ್ಜನಕ ಯಂತ್ರವನ್ನು ತರಿಸಿ, ಅದರಿಂದ ಆರುಸಾವಿರ ಮೇಣದ ಬತ್ತಿಗಳಷ್ಟು ಪ್ರಕಾಶವನ್ನು ಕೊಡುವ ವಿದ್ಯುದ್ದೀಪಗಳನ್ನಿಡಿಸಿದರು. ಅವುಗಳ ಬೆಳಕು ಸುಮಾರು ಒಂದೂವರೆ ಮೈಲಿಯಷ್ಟು ದೂರ ಹರಡುತ್ತಿತ್ತೆಂದು ಆಗಿನ ಒಂದು ವರ್ತಮಾನಪತ್ರಿಕೆಯಿಂದ ತಿಳಿಯುತ್ತದೆ.

ಅವರು ವಸ್ತುಪ್ರದರ್ಶನ(ಎಕ್ಸಿಬಿಷನ್)ಗಳಲ್ಲಿ ತೋರಿಸುತ್ತಿದ್ದ ಆದರವು ವಾಚಕರಿಗೆ ತಿಳಿದೇ ಇದೆ.

೧೮೭೪ನೆಯ ಮಾರ್ಚಿ ೧೪ರಲ್ಲಿ ಅವರು ಲಂಡನ್ ಪಟ್ಟಣದ ವಿಕ್ಟೋರಿಯಾ ಬೀದಿಯ ಜೆ. ಬಿ. ಚಾಲ್‌ಮರ್ಸ್ ಎಂಬ ಶಿಲ್ಪಿಯಿಂದ ಈ ಕೆಳಗೆ ಕಂಡ ಯಂತ್ರಗಳ ನಕ್ಷೆಗಳನ್ನೂ ಅಂದಾಜುಗಳನ್ನೂ ಬರೆಯಿಸಿ ತರಿಸಿದ್ದರು :—

(೧) ಬಾವಿಯಿಂದ ನೀರನ್ನೆತ್ತುವ ಸಳ್ಳಿ (ಪಂಪು)ಗಳು,

(೨) ಇಟ್ಟಿಕೆ ಹೆಂಚುಗಳನ್ನು ಮಾಡುವ ಯಂತ್ರೋಪಕರಣಗಳು,

(೩) ಮರವನ್ನು ಕುಯ್ಯುವ ಗರಗಸದ ಕಾರ್ಖಾನೆಯ ಆಯುಧ ಸಾಮಗ್ರಿ.

ಇವುಗಳನ್ನು ಕಾರ್ಯದಲ್ಲಿ ಉಪಯೋಗಪಡಿಸಿಕೊಳ್ಳಲು ತಕ್ಕಷ್ಟು ಕಾಲವನ್ನು ವಿಧಿಯು ಅವರಿಗೆ ಕೊಡದೆ ಹೋದನು.

---

# ಪರಿಚ್ಛೇದ ೧೦

## ಸಮಾಜ ಸಂಸ್ಕರಣ

"ಮಹಾಜನೋ ಯೇನ ಗತಃ ಸ ಪಂಥಾಃ"

ರಂಗಾಚಾರ್ಯರು ಮಂತ್ರಿಪದವಿಯಲ್ಲಿ ನಡೆಯಿಸಿದ ಸಾರ್ವಜನಿಕ ಕಾರ್ಯಗಳನ್ನು ಇದುವರೆಗೂ ಸಂಗ್ರಹವಾಗಿ ವಿವರಿಸಿದೆವು.

ಅವರು ಸಮಾಜಸಂಸ್ಕರಣದ ಕಡೆಗೂ ದೃಷ್ಟಿಯನ್ನು ತಿರುಗಿಸಿದ್ದರು. ಹಿಂದೂ ಸಮಾಜದಲ್ಲಿ ಅನೇಕ ನ್ಯೂನತೆಗಳೂ ಅಕ್ರಮಗಳೂ ಬೆಳೆದಿವೆ ಯೆಂದು ರಂಗಾಚಾರ್ಯರು ಅಂಗೀಕರಿಸಿದ್ದರಲ್ಲದೆ, ಅವುಗಳನ್ನು ತಿದ್ದಿ ಸಮಾಜಕ್ಕೆ ತಕ್ಕ ಸಂಸ್ಕಾರಮಾಡಬೇಕೆಂಬ ಅಭಿಪ್ರಾಯವನ್ನು ಅನು ಮೋದಿಸಿದ್ದರು. ಆದರೆ ಅವರು ಇತರರಂತೆ ಬಾಯಿಮಾತಿನ ಸಮಾಜ ಸಂಸ್ಕಾರಕರಲ್ಲ. "ಪುರಾಣ ಹೇಳುವುದಕ್ಕೆ, ಅವರೆಯ ಕಾಯಿ ತಿನ್ನು ವುದಕ್ಕೆ" ಎಂದು ವಾದಿಸಿದ ಆಚಾರ್ಯರಂತೆ, ಸಮಾಜಸಂಸ್ಕರಣ ವನ್ನು ಕುರಿತು ಸಭೆಗಳಲ್ಲಿ ಉಪನ್ಯಾಸ ಮಾಡಿ, ಮನೆಯಲ್ಲಿ ತದ್ವ್ಯತಿ ರಿಕ್ತವಾಗಿ ನಡೆದುಕೊಳ್ಳುವುದು ರಂಗಾಚಾರ್ಯರ ಸ್ವಭಾವವಾಗಿರ ಲಿಲ್ಲ. ಅವರು ಒಂದಾವರ್ತಿ ಸಮುದ್ರಯಾನ ಮಾಡಿದರೆಂದು ಮೇಲೆ ತಿಳಿಸಿದೆ. ನಮ್ಮ ತರುಣರು ಕೃಷಿ ಕಲಾ ವಾಣಿಜ್ಯಗಳಿಗೆ ಸಂಬಂಧಪಟ್ಟ ಮತ್ತು ರಾಜಕೀಯವಾದ ವಿದ್ಯೆಗಳನ್ನು ಕಲಿಯಲು ಸಮುದ್ರಯಾನ ಮಾಡಿ ವಿದೇಶಗಳಿಗೆ ಹೋಗಬಾರದಿದ್ದರೆ, ನಾವು ದಿನೇದಿನೇ ಕ್ಷೀಣಿಸು ವುದು ಖಂಡಿತವೆಂದು ರಂಗಾಚಾರ್ಯರು ತಿಳಿದುಕೊಂಡಿದ್ದರು.

ಆದರೆ ದೇಶಾಂತರಕ್ಕೆ ಹೋಗಿ ಬಂದವರೆಲ್ಲರೂ ದೇಶಾಂತರಕ್ಕೆ ಹೋಗದವರಿಗಿಂತ ಬುದ್ಧಿಶಾಲಿಗಳೆಂದು ಅವರು ಎಂದಿಗೂ ಭಾವಿಸಿರಲಾ ರರು. ಈ ವಿಷಯದಲ್ಲೊಂದು ಕಥೆಯುಂಟು: ಜಯರಾಮರಾಯರು ವಿಲಾಯಿತಿಯಿಂದ ಹಿಂದಿರುಗಿ ಬಂದಮೇಲೆ ಒಂದು ದಿನ ರಂಗಾಚಾರ್ಯ ರೊಡನೆ ಮಾತನಾಡುತ್ತಿರಲು, ತಮ್ಮ ಮಿತ್ರರೂ ಪ್ರಸಿದ್ಧರೂ ಆದ ಕೆಲವರು ಲಂಡನ್‌ಪಟ್ಟಣಸ್ಥರ ಮನೆಗಳ ಚಕ್ಕುಬಂದಿ ಆಕಾರಗಳನ್ನು ವಿವರಿಸಬೇಕೆಂದು ಆಚಾರ್ಯರವರು ಕೇಳಿದರಂತೆ. ಉತ್ತರ ಹೇಳುವುದು ಜಯರಾಮರಾಯರಿಗೆ ಕಷ್ಟವಾಯಿತು. ಆಗ ಇಂಗ್ಲೆಂಡನ್ನು ಕಾಣದ ರಂಗಾಚಾರ್ಯರು ತಾವೇ ಲಂಡನ್ ಪಟ್ಟಣದ ನಕ್ಷೆಯನ್ನು ಬರೆದು ಅದರಮೇಲೆ ತಮ್ಮ ಮಿತ್ರರ ಮನೆಗಳನ್ನು ಊಹೆಯಿಂದ ಗುರುತಿಸಿದ ರಂತೆ. ರಂಗಾಚಾರ್ಯರು ಮೊದಲೇ ಲಂಡನ್ ನಗರದ ವರ್ಣನೆಯನ್ನು ಓದಿ, ಅದರ ಬೀದಿ ಸಂದಿಗಳನ್ನು ನಕಾಶೆಯಿಂದಲೇ ಗೊತ್ತುಮಾಡಿ

ಕೊಂಡಿದ್ದಿರಬೇಕೆಂದು ಅವರ ಪುಸ್ತಕ ಭಂಡಾರದಲ್ಲಿದ್ದ ಒಂದು ಲಂಡನ್ ಪುರವರ್ಣನೆಯ ಗ್ರಂಥದಿಂದ ಊಹಿಸಬಹುದಾಗಿದೆ.

ಸಮಾಜ ಸಂಸ್ಕರಣ ವಿಷಯದಲ್ಲಿ ರಂಗಾಚಾರ್ಯರು ವಿಪರೀತಾಭಿಪ್ರಾಯಗಳನ್ನೇನೂ ಇಟ್ಟುಕೊಂಡಿರಲಿಲ್ಲ. ಇತರ ಕೆಲವು ಮಂದಿ ಸಂಸ್ಕಾರಕರಂತೆ ಅವರು ನಮ್ಮ ಸಂಪ್ರದಾಯಗಳೆಲ್ಲವೂ ಕೆಟ್ಟುವೆಂದೂ ಅವೆಲ್ಲವೂ ಸಂಪೂರ್ಣವಾಗಿ ಅಳಿದುಹೋಗಿ ಪರದೇಶೀಯರ ಸಂಪ್ರದಾಯಗಳೇ ನಮ್ಮಲ್ಲಿ ಆಚರಣೆಗೆ ಬರಬೇಕೆಂದೂ ಹೇಳುತ್ತಿರಲಿಲ್ಲ. ಈ ಸಂಗತಿಯು ಕೆಳಗೆ ಸೂಚಿಸಲ್ಪಟ್ಟಿದೆ. ೧೮೮೧ನೆಯ ಇಸ್ವಿಯಲ್ಲಿ ಬೆಂಗಳೂರಿನಲ್ಲಿ ಪಂಡಿತ ಶಿವನಾಥಶಾಸ್ತ್ರಿಗಳೆಂಬ ಬಂಗಾಳಾ ದೇಶಸ್ಥರು ಹಿಂದೂಗಳ ಜಾತಿಪದ್ಧತಿಯನ್ನು ಖಂಡಿಸಿ ಒಂದು ಉಪನ್ಯಾಸವನ್ನು ಕೊಟ್ಟರು. ಆ ಸಂದರ್ಭದಲ್ಲಿ ರಂಗಾಚಾರ್ಯರು ಸೂಚಿಸಿದ ಅಭಿಪ್ರಾಯಗಳೇನೆಂದರೆ :—

ಜಾತಿಯ ಹೆಸರಿನಲ್ಲಿ ನಮ್ಮ ಸ್ವತಂತ್ರವಾದ ನಡೆವಳಿಕೆಗೆ ಈಗ ಉಂಟಾಗಿರುವ ಅನೇಕ ಅನಾವಶ್ಯಕವಾದ ನಿರ್ಬಂಧಗಳನ್ನು ತೆಗೆದುಹಾಕಿ, ಪ್ರತಿಯೊಬ್ಬನೂ ತನ್ನ ವಿದ್ಯಾಬುದ್ಧಿಗಳ ಉನ್ನತಿಗಾಗಿ ತನ್ನ ಮನಸ್ಸಿಗೆ ನ್ಯಾಯವೆಂದು ತೋರುವಂತೆ ನಡೆಯುವವರೆಗೂ ನಾವು ಅಭಿವೃದ್ಧಿ ಹೊಂದಲಾರೆವೆಂದು ನಾನು ನಂಬಿದ್ದೇನೆ. ಎಲ್ಲಾ ಜಾತಿ ಮತಗಳವರೂ ಪರಸ್ಪರ ಸೋದರ ಭಾವದಿಂದ ಇರುವುದೂ, ವಿದ್ಯಾಸದ್ಗುಣಗಳು ಯಾರಲ್ಲಿದ್ದರೂ ಅವುಗಳನ್ನು ಗ್ರಹಿಸುವುದೂ, ಕಷ್ಟಪಟ್ಟು ಕೆಲಸಮಾಡುವ ಅಭ್ಯಾಸವು ಜಾತಿ ಪಂಗಡಗಳ ಭೇದವಿಲ್ಲದೆ ಎಲ್ಲರಿಗೂ ಒಂದೇ ರೀತಿ ಗೌರವಕರವೆಂದು ಎಣಿಸುವುದೂ ಅತ್ಯಂತಾವಶ್ಯಕ. ಆದರೆ ಈ ವಿಷಯದಲ್ಲಿ ನಮಗಿರುವ ನ್ಯೂನತೆಗಳೆಲ್ಲಕ್ಕೂ ಜಾತಿ ವಿಭಾಗವೇ ಕಾರಣವೆಂಬುದನ್ನು ನಾನು ಒಪ್ಪಲಾರೆ. ವರ್ಣ ಧರ್ಮಗಳನ್ನು ಬಿಡುವುದರಿಂದ ನಮಗೆ ಶ್ರೇಯಸ್ಸುಂಟಾಗುವುದೆಂಬುದರಲ್ಲಿ ನನಗೆ ನಂಬುಗೆಯಿಲ್ಲ. ವಿವಾಹ ಬೆಳೆಸುವುದರ ಮೂಲಕ ವರ್ಣಗಳೆಲ್ಲವನ್ನೂ ಬೆರೆಸುವುದರಿಂದ ನಮ್ಮ ಸಮಾಜದ ಅನಿಷ್ಟಗಳೆಲ್ಲವೂ ಪರಿಹಾರವಾಗುವವೆಂದು ನನಗೆ ತೋರುವುದಿಲ್ಲ. ಪೂರ್ವದಲ್ಲಿ ಬೇರೆ ಬೇರೆ ಜಾತಿಗಳವರು ಅವರವರ ಬುದ್ಧಿ ಗುಣಗಳಿಗನುಸಾರವಾಗಿ ವೃತ್ತಿ ಕಸಬುಗಳನ್ನವಲಂಬಿಸಿದ್ದುದರಿಂದ ದೇಶಕ್ಕೆ ಏಳಿಗೆಯುಂಟಾಗಿತ್ತೆಂದು ಚರಿತ್ರೆಯಿಂದ ಗೊತ್ತಾಗುವುದು. ಈಚಿನ ಸಾಮಾಜಿಕ ನೀತಿ ಶಾಸ್ತ್ರವೂ ಸಹ ಬೇರೆ ಬೇರೆ ಜಾತಿಗಳವರು ತಮತಮಗೆ ಸ್ವಾಭಾವಿಕವಾಗಿ ಬಂದ

**ಉದ್ಯೋಗಗಳನ್ನು ಮಾಡುವುದೇ ವರ್ಣ ಸಂಕರಕ್ಕಿಂತಲೂ ಉತ್ತಮವೆಂದು ಅಭಿಪ್ರಾಯ ಪಡುವಂತೆ ಕಾಣುತ್ತದೆ.**

ಸ್ತ್ರೀಯರು ಸತ್ಸಂಪ್ರದಾಯಗಳನ್ನತಿಕ್ರಮಿಸದ ವಿದ್ಯಾವತಿಯರಾಗಬೇಕೆಂಬುದು ರಂಗಾಚಾರ್ಯರ ತಾತ್ಪರ್ಯವಾಗಿತ್ತೆಂದು ಹಿಂದೆ ನೋಡಿರುವೆವು. ಅದೇ ಉಪನ್ಯಾಸದಲ್ಲಿಯೇ ಅವರು, ವಿದ್ಯಾವತಿಯರು ತಾವೇ ಒಟ್ಟುಗೂಡಿ ಸ್ತ್ರೀಯರಿಗಾಗಿ ಆಗಬೇಕಾದ ಸಾಮಾಜಿಕ ವ್ಯವಸ್ಥೆಯನ್ನು ನಿಷ್ಕರ್ಷಿಸಬೇಕೆಂದೂ; ಗಂಡಸರು ಹೆಂಗಸರ ಏರ್ಪಾಟುಗಳನ್ನು ಗೊತ್ತುಮಾಡ ಹೊರಟರೆ ಅದರಲ್ಲಿ ಅವಿವೇಕಗಳಾಗುವುದು ಖಂಡಿತವೆಂದೂ; ಪ್ರತಿಯೊಂದು ಗುಂಪು, ಅಥವಾ ಜಾತಿ, ಅಥವಾ ಪಂಗಡದವರೂ ತಂತಮ್ಮ ಇಷ್ಟಾನಿಷ್ಟಗಳನ್ನು ತಾವು ತಾವೇ ಚೆನ್ನಾಗಿ ಅರಿಯಬಲ್ಲವರಾದಕಾರಣ ಸ್ತ್ರೀಯರ ಹಿತಾಹಿತಗಳನ್ನು ಅವರಲ್ಲಿ ಜ್ಞಾನವತಿಯರಾದವರೇ ಸರಿಯಾಗಿ ನಿಶ್ಚಯಿಸಬಲ್ಲರೆಂದೂ; ಪುರುಷರು ಸ್ತ್ರೀ ಸ್ವಾತಂತ್ರ್ಯಕ್ಕೆಂದು ಮಾಡಬಹುದಾದ ಸುಧಾರಣೆಗಳು ಅಲ್ಪ ವ್ಯಾಪ್ತಿಯ ಅಥವಾ ಅತಿ ವ್ಯಾಪ್ತಿಯ ದೋಷದಿಂದ ಕೂಡಿದ್ದಾವೆಂದೂ ವಾದಿಸಿದರು.

ರಂಗಾಚಾರ್ಯರು ರಾಜಕೀಯ ವಿಷಯಗಳಲ್ಲಿ ಜಾತಿಭೇದ ವರ್ಣಭೇದಗಳನ್ನೆಣಿಸದೆ, ಸರ್ವರಲ್ಲಿಯೂ ಒಂದೇ ವಿಧವಾದ ಅಭಿಮಾನವನ್ನು ತೋರುತ್ತಿದ್ದರೆಂಬುದಕ್ಕೆ ಬೆಂಗಳೂರು ಬಳಿಯ ವೈಟ್‌ಫೀಲ್ಡ್ (ಕಾಡುಗೋಡಿ) ಸ್ವಾಸ್ಥ್ಯವು ನಿದರ್ಶನವಾಗಿದೆ. ಯೂರೇಷಿಯನ್ ಅಥವಾ ಆಂಗ್ಲೋ-ಇಂಡಿಯನ್ ಎಂಬ ಮಿಶ್ರಜಾತಿಯ ಜನರು, ತಮ್ಮದೆಂದು ಹೇಳಿಕೊಳ್ಳಲು ಒಂದು ಸ್ಥಳವಿಲ್ಲದವರಾಗಿ, ಭಾರತೀಯ ಮತ್ತು ಐರೋಪ್ಯ ಸಮಾಜಗಳೆರಡರಿಂದಲೂ ಬಹಿಷ್ಕೃತರಾಗಿ, ಅಲೆದಾಡುತ್ತಿದ್ದುದನ್ನು ರಂಗಾಚಾರ್ಯರು ಕಂಡು, ದಯಾಪರಿಪೂರಿತರಾಗಿ ಅವರನ್ನು ಕರೆದು, ಅವರು ವಸತಿ ಕಲ್ಪಿಸಿಕೊಳ್ಳಲು ವಿಸ್ತಾರವಾದ ಭೂಮಿಯನ್ನು ತೋರಿಸಿ, ಅಲ್ಲಿ ಅವರು ಮನೆ ಮಠಗಳನ್ನು ಕಟ್ಟಿಕೊಂಡು, ಕೃಷಿ ಕಸಬುಗಳನ್ನವಲಂಬಿಸಿ, ಈ ದೇಶದವರಂತೆ ಬಾಳಬಹುದೆಂದು ಹಿತೋಪದೇಶ ಮಾಡಿದರು. ಎಲ್ಲರ ತುಚ್ಛೀಕಾರಕ್ಕೂ

ಗುರಿಯಾಗಿ ದೀನರಾಗಿದ್ದ ಯೂರೇಷಿಯನ್ನರ ಬಾಳನ್ನು ಉತ್ತಮ ಗೊಳಿಸಲು ರಂಗಾಚಾರ್ಯರೇ ಇಂಡಿಯಾದಲ್ಲೆಲ್ಲಾ ಪ್ರಥಮ ಪ್ರಯತ್ನ ಮಾಡಿದವರು. ಈ ಮಹೋಪಕಾರವನ್ನು ಆ ಜನರು ರಂಗಾಚಾರ್ಯರು ಕಾಲಾಧೀನರಾದ ಬಳಿಕ ಅತ್ಯಂತ ಕೃತಜ್ಞತೆಯೊಡನೆ ಸ್ಮರಿಸಿ, ಅವರ ಕುವರರಿಗೆ ತಮ್ಮ ಅನುತಾಪವನ್ನರುಹಿದರು.

---

## ಪರಿಚ್ಛೇದ ೧೧

### ಮುಖ್ಯ ಗುಣಗಳು—ಅವಸಾನ

''ಯದ್ಯದಾಚರತಿ ಶ್ರೇಷ್ಠ ಸ್ತತ್ತದೇವೇತರೋ ಜನಃ''

ಸ್ವಕೀಯ ವಿಷಯಗಳಾದ ನಡೆ ನುಡಿ ಮೊದಲಾದುವುಗಳಲ್ಲಿ ರಂಗಾಚಾರ್ಯರು ಸಭ್ಯರಾಗಿಯೂ, ಡಂಭವಿಲ್ಲದವರಾಗಿಯೂ, ಅಕೃತ್ರಿಮಿಗಳಾಗಿಯೂ ಸರ್ವ ಸುಲಭರಾಗಿಯೂ, ದಯಾಶಾಲಿಗಳಾಗಿಯೂ ಇದ್ದರು. ಅವರ ಮುಖ್ಯ ಗುಣವು ನ್ಯಾಯಪಕ್ಷಪಾತಿತ್ವ. ಅವರ ಆಕಾರದಿಂದಲೇ ಅವರು ನಿಷ್ಕಪಟಿಗಳೆಂದೂ ಖಂಡಿತವಾದಿಗಳೆಂದೂ ಬೋಧೆಯಾಗುತಲಿತ್ತು. ಉಡಿಗೆ ತೊಡಿಗೆಗಳಲ್ಲಿ ಅವರು ಪುರಾತನವಾದ ದೇಶೀಯ ಪದ್ಧತಿಯನ್ನೇ ಅನುಸರಿಸುತ್ತಿದ್ದರು. ಅವರ ಸತ್ಸ್ವಭಾವದಿಂದಲೇ ಅವರಿಗೆ ಒಂದು ದಿವ್ಯವಾದ ತೇಜಸ್ಸುಂಟಾಗಿತ್ತು. ಆ ತೇಜಸ್ಸು ಈ ಲೋಕದ ವೇಷ ಭೂಷಣಗಳಿಂದ ಉಂಟಾಗ ತಕ್ಕುದಲ್ಲ.

ತಮ್ಮ ಕೈಕೆಳಗಿನ ನೌಕರರಿಗೆ ಅವರು ಒಂದೊಂದು ವೇಳೆ ಕಠಿನರಾಗಿ ಕಂಡುಬರುತ್ತಿದ್ದರೂ, ವಸ್ತುತಃ ಅವರ ಮನಸ್ಸು ಬಲು ಮೃದುವಾದುದು. ಯಾರಿಗೂ ಅವರು ಅನ್ಯಾಯವಾಗಿ ಕೆಡಕುಮಾಡಿದವರಲ್ಲ. ಮಾಡಿದ ತಪ್ಪನ್ನೊಪ್ಪಿಕೊಂಡು ಪಶ್ಚಾತ್ತಾಪಪಟ್ಟವರನ್ನು ಕ್ಷಮಿಸಲು ಅವರು ಸಿದ್ಧರಾಗಿರುತ್ತಿದ್ದರು. ಪ್ರಜೆಗಳಿಗಂತೂ ಅವರು ಅತ್ಯಂತ ಸುಲಭರಾಗಿ, ನಮ್ರರಾಗಿದ್ದರು. ತಮ್ಮ ಬಳಿಗೆ ಯಾರು ಬಂದರೂ,

ಅವರನ್ನು ವಿಶ್ವಾಸದಿಂದ ಕಂಡು, ಸಾವಕಾಶವಾಗಿ ಮಾತನಾಡಿಸಿ, ಅವರ ಸುಖದುಃಖಗಳನ್ನು ವಿಚಾರಿಸಿ, ದೇಶಸ್ಥಿತಿಯನ್ನೂ, ಅಧಿಕಾರಿಗಳ ನಡತೆಯನ್ನೂ ಅವರಿಂದ ತಿಳಿದುಕೊಳ್ಳುತ್ತಿದ್ದರು. ಯಾವ ಪ್ರಾಂತದ ಸಮಾಚಾರಗಳು ತಮಗೆ ತಿಳಿಯಬೇಕಾಗಿದ್ದರೂ ಅದೆಲ್ಲವನ್ನೂ ಆ ಪ್ರಾಂತದಿಂದ ಬೆಂಗಳೂರು ಮೈಸೂರುಗಳಿಗೆ ಬರುತ್ತಿದ್ದ ಪ್ರಯಾಣಿಕರನ್ನು ವಿಚಾರಿಸಿಯೇ ಅವರು ಅರಿತುಕೊಳ್ಳುತ್ತಿದ್ದರಂತೆ. ಇಂಗ್ಲಿಷ್, ತೆಲುಗು, ತಮಿಳು, ಕನ್ನಡ, ಹಿಂದೂಸ್ತಾನಿ—ಈ ಭಾಷೆಗಳಲ್ಲೆಲ್ಲ ಅವರು ಬೇಗ ಬೇಗನೆ—ಒಂದೊಂದು ಸಲ ಅವಸರದಲ್ಲಿ ಅನೇಕ ಭಾಷೆಗಳನ್ನು ಬೆರೆಸಿ—ಮಾತನಾಡುತ್ತಿದ್ದರು.

ಬರೆವಣಿಗೆಯಲ್ಲಿಯೂ, ಬಾಯಿಮಾತಿನಲ್ಲಿಯೂ ಅವರ ಭಾಷಾಶೈಲಿಯು ಸರಳವೂ, ವಿಶದವೂ, ಬೇಗನೆ ಮನಸ್ಸಿಗೆ ಹಿಡಿಯತಕ್ಕುದೂ ಆಗಿತ್ತು; ಕೇವಲ ಪಾಂಡಿತ್ಯ ಪ್ರದರ್ಶಕವಾಗಿರಲಿಲ್ಲ. ಅವರ ಲೇಖನ* ಶಕ್ತಿಯು ಅದ್ಭುತವಾದುದು. ಕೈಯಲ್ಲಿ ಹಿಡಿದ ಪ್ರತಿಯೊಂದು ವಿಷಯವನ್ನೂ ಆಮೂಲಾಗ್ರವಾಗಿ ಪರಿಶೋಧಿಸಿ, ಪೂರ್ವಾಪರಗಳೆಲ್ಲವನ್ನೂ ಅತಿಸ್ವಲ್ಪ ಕಾಲದೊಳಗಾಗಿ ನಿರ್ಧರಿಸಿ, ತಮ್ಮ ಅಭಿಪ್ರಾಯವನ್ನು ಸಕಾರಣವಾಗಿ, ವಿವರವಾಗಿ, ವೇಗದಿಂದ ಹೇಳಿ ಬರೆಸುತ್ತಿದ್ದರು.

ಮತ ವಿಷಯದಲ್ಲಿ, ರಂಗಾಚಾರ್ಯರು ಭಗವದ್ಭಕ್ತರಾಗಿಯೂ, ಸ್ವಮತವನ್ನು ಬಿಡದವರಾಗಿಯೂ, ಪರಮತವನ್ನು ನಿಂದಿಸದವರಾಗಿಯೂ, ಶಿಷ್ಟಾಚಾರ ಸಂಪನ್ನರಾಗಿಯೂ ಇದ್ದರು. ಆರ್ಷೇಯವಾದ ತಮ್ಮ ಮತವನ್ನು ಅವರು ದೃಢವಾಗಿ ನಂಬಿದ್ದರು. ಭಗವಂತನಲ್ಲಿ ಭಕ್ತಿಯಿಲ್ಲದವರು ಮಹತ್ಕಾರ್ಯಗಳನ್ನು ಮಾಡಲಾಗುವುದೆ?

ಸಚಿವ ಧರ್ಮಕ್ಕೆ ತಮ್ಮ ಮನೋಬುದ್ಧಿಕಾಯಗಳನ್ನು ವಿಾಸಲಾಗಿಟ್ಟಿದ್ದರೂ ಗೃಹಸ್ಥ ಧರ್ಮದಲ್ಲಿ ಅವರು ಅಶ್ರದ್ಧೆ ತೋರಿಸಿದವರಲ್ಲ. ಅವರಿಗೆ ಒಬ್ಬ ಮಗನೂ ಐವರು ಹೆಣ್ಣುಮಕ್ಕಳೂ ಇದ್ದರು. ಇತರ ಬಂಧುಗಳೂ ಉಪಜೀವಿಗಳೂ ಸೇರಿ, ಅವರ ಕುಟುಂಬವು ದೊಡ್ಡ

---

* ಅವರ ಲಿಪಿ ಮಾತ್ರ ಸ್ವಲ್ಪವೂ ಚೆನ್ನಾಗಿರಲಿಲ್ಲ.

ದಾಗಿತ್ತು. ಅವರೆಲ್ಲರಲ್ಲಿಯೂ ರಂಗಾಚಾರ್ಯರು ಪೂರ್ಣವಾದ ಮಮತೆಯಿಂದ ವರ್ತಿಸಿ, ಅವರ ಪುರೋವೃದ್ಧಿಗೆ ತಕ್ಕ ಏರ್ಪಾಟು ಗಳನ್ನು ಮಾಡಿದ್ದರು. ಅವರ ಕಡೆಯ ದಾಯಶಾಸನ(ವಿಲ್)ದಲ್ಲಿ ತಮ್ಮನ್ನು ಚಿಕ್ಕಂದಿನಿಂದ ಲಾಲಿಸಿದ್ದ ಚಿಕ್ಕಮ್ಮ ಮೊದಲಾದವರನ್ನೂ, ತಮ್ಮನ್ನೇ ನಂಬಿಕೊಂಡಿದ್ದ ದೂರದ ಬಂಧುಗಳನ್ನೂ ಮರೆಯದೆ, ಅವರೆಲ್ಲರಿಗೂ ಯಥೋಚಿತವಾಗಿ ಭಾಗಗಳನ್ನು ಹಂಚಿರುವರು. ಅವರು ವಿರಕ್ತರಂತೆ ನಟಿಸಿದವರಲ್ಲ; ಸಂಸಾರದ ಸುಖದುಃಖಗಳೆರಡರಲ್ಲಿಯೂ ತಮ್ಮ ಪಾಲಿಗೆ ಬಂದ ಭಾಗವನ್ನು ಮನಃಪೂರ್ವಕವಾಗಿ ಅನುಭವಿಸು ತ್ತಿದ್ದರು. ಊಟ ಉಪಚಾರಗಳಲ್ಲಿಯೂ, ಮಕ್ಕಳ ಆಟಪಾಟಗಳ ಲ್ಲಿಯೂ ಅವರು ಸುಖಾನುಭವಮಾಡದೆ ಇದ್ದವರಲ್ಲ.

ಅವರು ಉದಾರ ಸ್ವಭಾವದವರಾಗಿಯೂ ದಾನಶೀಲರಾಗಿಯೂ ಇದ್ದರು. ಹಿರಿಯರಲ್ಲಿಯೂ ಇಷ್ಟಮಿತ್ರರಲ್ಲಿಯೂ ಆದರಣೆಯುಳ್ಳ ವರಾಗಿಯೂ, ದೀನ ದರಿದ್ರರಲ್ಲಿ ಕರುಣೆಯುಳ್ಳವರಾಗಿಯೂ ಇದ್ದರು. ಮಾತಿನಲ್ಲಿ ಮುಂಗೋಪಿಗಳಾದರೂ ನಡತೆಯಲ್ಲಿ ಕೊಡುಗೈಯವ ರಾಗಿದ್ದರು. ಸಾರ್ವಜನಿಕ ಕಾರ್ಯಗಳಿಗೆ ಅವರು ಧಾರಾಳವಾಗಿ ದ್ರವ್ಯ ಸಹಾಯ ಮಾಡುತ್ತಿದ್ದರು. ಮದ್ರಾಸ್ ಪಟ್ಟಣದಲ್ಲಿ ಪ್ರಕಟ ವಾಗಲಾರಂಭಿಸಿದ್ದ ಒಂದು ದೇಶೀಯ ಪತ್ರಿಕೆಗೆ ಒಂದು ವರ್ಷಕ್ಕಾಗು ವಷ್ಟು ಕಾಗದವನ್ನು ಅವರು ಧರ್ಮಾರ್ಥವಾಗಿ ಕೊಂಡು ಕೊಡು ತ್ತಿದ್ದರಂತೆ.

ಸಂಗೀತ ಸಾಹಿತ್ಯಗಳಲ್ಲಿ ಅವರಿಗೆ ನೈಜವಾದ ಅಭಿರುಚಿಯಿತ್ತು. ಸ್ವತಃ ಹಾಡಲು ತಕ್ಕ ಶಾರೀರಸಂಪತ್ತಿಲ್ಲದಿದ್ದರೂ, ಒಳ್ಳೆಯ ಹಾಡು ಗಾರಿಕೆಯಲ್ಲಿ ಅವರಿಗೆ ತುಂಬಾ ಪ್ರೀತಿ. ತಮ್ಮ ಮನೆಯಲ್ಲಿ ಆಗಾಗ ಸಂಗೀತದ "ಕಛೇರಿ" ಮಾಡಿಸುತ್ತಿದ್ದರಲ್ಲದೆ, ಒಬ್ಬ ಹಾಡುಗಾರ ನನ್ನು ಸಂಬಳಕೊಟ್ಟು ಇಟ್ಟುಕೊಂಡಿದ್ದರು.

ಎಲ್ಲ ಮಹಾಪುರುಷರಂತೆ ರಂಗಾಚಾರ್ಯರು ತಮ್ಮ ಕಡೆಯ ದಿನದವರೆಗೂ ವಿದ್ಯಾರ್ಥಿದಶೆಯಲ್ಲಿದ್ದರು. ಅವರ ಗ್ರಂಥ ಕಾಲಕ್ಷೇಪವೇ

ಅವರ ಮಹನೀಯತೆಗೆ ಮುಖ್ಯ ಕಾರಣವೆಂದು ಹೇಳಿದರೆ ಅತ್ಯುಕ್ತಿಯಾಗದು. ಅವರು ಅರಿಸ್ಟೋಟಲ್ ಎಂಬ ಪ್ರಸಿದ್ಧ ಪುರಾತನ ತತ್ತ್ವಜ್ಞನಿಂದ ಮೊದಲಾಗಿ ಜಾನ್ ಸ್ಟೂಅರ್ಟ್ ಮಿಲ್ ಎಂಬ ಆಧುನಿಕ ತತ್ತ್ವ ಶೋಧಕನವರೆಗೂ ಇದ್ದ ಮುಖ್ಯ ಮುಖ್ಯ ಪಾಶ್ಚಾತ್ಯ ತತ್ತ್ವವಿಚಾರಕರ ಗ್ರಂಥಗಳನ್ನೋದಿದ್ದರೆಂದು ಅವರ ಪುಸ್ತಕ ಭಾಂಡಾಗಾರದಿಂದ ತೋರಿಬರುತ್ತದೆ. ಅರಿಸ್ಟೋಟಲ್ ಮತ್ತು ಮಿಲ್ ತತ್ತ್ವಜ್ಞರ (ರ್‍ಯಾಷನಲಿಸಮ್) ವಿಚಾರಪಾರಮ್ಯ ಮತದ ಭಾವನೆಗಳನ್ನು ಗ್ರಹಿಸಿದ್ದ ಕಾರಣದಿಂದಲೇ ರಂಗಾಚಾರ್ಯರಿಗೆ ಪ್ರಜಾ ಪಾರಮ್ಯದ ಭಾವನೆಗಳೂ, ಸಾಮಾಜಿಕ ನೀತಿಯ ಸ್ವತಂತ್ರವಿವೇಚನೆಯೂ, ಸರ್ವಸಮತೆಯೂ, ಸಂಸ್ಕಾರಕಾರಕ ಬುದ್ಧಿಯೂ ಉಂಟಾಗಿದ್ದುವೆಂದು ಧಾರಾಳವಾಗಿ ಹೇಳಬಹುದು. ಅವರು ತಮ್ಮ ಕಾಲದ ರಾಜ್ಯಶಾಸ್ತ್ರಗ್ರಂಥಗಳನೇಕವನ್ನು ವ್ಯಾಸಂಗಮಾಡಿದ್ದರು. ಲಾರ್ಡ್ ಬ್ರೂಹಂ ಎಂಬ ಆಂಗ್ಲೇಯ ರಾಜ್ಯತಂತ್ರವಿಶಾರದನ ಉಪನ್ಯಾಸಗಳನ್ನೂ, ಇಂಗ್ಲೆಂಡಿನ ರಾಜ್ಯ ಕ್ರಮದ ಚರಿತ್ರೆಯನ್ನೂ, ಲಾರ್ಡ್ ಗ್ರೇ, ಸರ್ ಜಾರ್ಜ್ ಲ್ಯೂಯಿ ಮುಂತಾದವರು ಬ್ರಿಟಿಷ್ ಪಾರ್ಲಿಮೆಂಟಿನ ತಿದ್ದುಪಾಟುಗಳನ್ನು ಕುರಿತು ಬರೆದಿದ್ದ ಪುಸ್ತಕಗಳನ್ನೂ ಓದಿದ್ದರು. ಇಂಡಿಯಾ ದೇಶಕ್ಕೆ ಸಂಬಂಧಪಟ್ಟ ತಾತ್ಕಾಲಿಕ ರಾಜಕೀಯ ಲೇಖನೋಪನ್ಯಾಸಗಳನ್ನಲ್ಲದೆ, ಪೂರ್ವಚರಿತ್ರೆಯನ್ನೂ ವ್ಯಾಸಂಗಮಾಡಿದ್ದರು. ಚೀನಾ, ಫ್ರಾನ್ಸು, ರಷ್ಯಾ ಮುಂತಾದ ದೇಶಗಳ ಚರಿತ್ರೆಗಳನ್ನು ನೋಡಿದ್ದರು. ಕಾಮ್ಟೆ ಎಂಬಾತನ ಲೋಕಸೇವಾ ಮತವನ್ನೂ, ಗಯಿಜಟ್ ಎಂಬಾತನ ಮಾನುಷ ಸಮಾಜಾಭ್ಯುದಯದ ವೃತ್ತಾಂತವನ್ನೂ, ಸಿಸ್ ಮಾಂಡಿ ಎಂಬಾತನ ಐರೋಪ್ಯ ಸಾಹಿತ್ಯ ಚರಿತ್ರೆಯನ್ನೂ, ಡಿಕ್ಕೆನ್ಸ್, ಥ್ಯಾಕರೇ ಎಂಬವರ ಪ್ರಸಿದ್ಧ ಕಾದಂಬರಿಗಳನ್ನೂ, ವೃತ್ತಾಂತ ಪತ್ರಿಕೆಗಳ ಪ್ರಚಾರದ ಕಥೆಯನ್ನೂ ಅವಲೋಕಿಸಿದ್ದರು. ಇಷ್ಟರ ಮೇಲೆ, ಖನಿಜಶಾಸ್ತ್ರ, ಖಗೋಳಶಾಸ್ತ್ರ, ವೈದ್ಯಶಾಸ್ತ್ರ—ಇವುಗಳೊಡನೆಯೂ ಪರಿಚಯವನ್ನು ಬೆಳೆಸಿದ್ದರು. ಆಯುರ್ವೇದವನ್ನು ಕಲಿಯಬೇಕೆಂದು ಅವರು ಅನೇಕ ತಾಳೆಯೋಲೆಯ ಪ್ರಾಚೀನ ಪುಸ್ತಕಗಳನ್ನು

ಶೇಖರಿಸಿದ್ದರಂತೆ. ಈ ರೀತಿ ಬುದ್ಧಿಗೆ ಸರ್ವದಾ ಉದ್ಯೋಗವನ್ನು ಕಲ್ಪಿಸಿದ್ದ ಕಾರಣದಿಂದಲೇ ಅದು ಬೆಳೆದು, ಬಲಿತು, ಲೋಕೋಪಕಾರಕ ವಾಗಿ, ಅವರಿಗೆ ಶ್ರೇಯಸ್ಸನ್ನೂ ಯಶಸ್ಸನ್ನೂ ಸಂಪಾದಿಸಿಕೊಟ್ಟಿತು.

ರಂಗಾಚಾರ್ಯರ ಮಿತ್ರ ಮಂಡಲಿಯು ವಿಶಾಲವಾಗಿತ್ತು. ಅದ ರಲ್ಲಿ ಆ ಕಾಲದ ಐರೋಪ್ಯರ ಮತ್ತು ಭಾರತೀಯರ ಪೈಕಿ ವಿದ್ಯಾಸದ್ಗುಣ ಗಳಿಂದ ಅತ್ಯುತ್ತಮರೆನಿಸಿಕೊಂಡಿದ್ದವರು ಸೇರಿದ್ದರು. ಯುರೋಪಿ ಯನರಲ್ಲಿ ಮುಖ್ಯರಾದವರು:—ಜಿ. ಯುನ್. ಟೇಲರ್, ಇ. ಬಿ. ಪೊವೆಲ್, ಸರ್ ಜೇಮ್ಸ್ ಗಾರ್ಡನ್, ಜಿ. ಬಿ. ಮ್ಯಾಲೆಸನ್, ಡಬ್ಲ್ಯು. ಎ. ಪೋರ್ಟರ್, ಆರ್. ಎ. ಡ್ಯಾಲಿಯೆಲ್, ಲಾರ್ಡ್ ನೇಪಿಯರ್, ಸರ್ ರಿಚರ್ಡ್ ಮಿಾಡ್, ಸರ್ ವಿಲಿಯಂ ಡಿಗ್ಬಿ, ಚಾರ್ಲ್ಸ್ ಎಲಿಯಟ್, ಎಲ್. ಬಿ. ಬೌರಿಂಗ್, ಆರ್. ಎಲ್ಲಿಸ್, ಒ. ಜೆ. ಬರ್ನ್, ಜಿ. ಬಿ. ನಾರ್ಟನ್ ಇತ್ಯಾದಿಗಳು. ಭಾರತೀಯರಲ್ಲಿ ಮುಖ್ಯರಾದವರು:— ರಾಜಾ ಸರ್ ಟಿ. ಮಾಧವರಾಯರು, ಸರ್ ಟಿ. ಮುತ್ತುಸ್ವಾ ಮಯ್ಯರು, ಸರ್ ಎ. ಶೇಷಯ್ಯಶಾಸ್ತ್ರಿಗಳು, ವೆಂಬಾಕಂ ರಾಮಯ್ಯಂ ಗಾರ್ಯರು, ದಿವಾನ್ ಬಹದ್ದೂರ್ ಆರ್. ರಘುನಾಥರಾಯರು, ಪಿ. ಚಂಚಲರಾವ್, ಸಿ.ಐ.ಇ., ಅವರು, ಮುರಾರ್ಜಿ ಗೋಕುಲ ದಾಸ್, ಸಿ.ಐ.ಇ., ಅವರು—ಇತ್ಯಾದಿಗಳು. ಇವರೆಲ್ಲರೊಡನೆಯೂ ರಂಗಾಚಾರ್ಯರು ಅವರವರ ಅಂತಸ್ತಿಗೆ ತಕ್ಕ ಘನವಿಷಯಗಳಮೇಲೆ ಪತ್ರ ಪ್ರಸಂಗವನ್ನು ಬೆಳೆಸುತ್ತಿದ್ದರು. ಅವು ಕ್ಷೇಮಸಮಾಚಾರದ ಅಥವಾ ಔಪಚಾರಿಕ ಮಾತ್ರವಾದ ಕಾಗದಗಳಲ್ಲ. ಉಭಯ ದೇಶಗಳವರ ಸುಖ ದುಃಖಗಳಿಗೆ ಸಂಬಂಧಪಟ್ಟ ಗಹನವಾದ ಸಂಗತಿಗಳೂ ಸನ್ನಿವೇಶಗಳೂ ಅವುಗಳಲ್ಲಿ ಚರ್ಚೆಯಾಗುತ್ತಿದ್ದವು. ಆಂಗ್ಲೇಯ ಸ್ನೇಹಿತರು ಇಂಡಿಯಾದೇಶದ ಮತ್ತು ಮೈಸೂರುದೇಶದ ವೃತ್ತಾಂತ ಗಳನ್ನು ಕೇಳಿ ತಿಳಿದುಕೊಂಡು, ತಮ್ಮಿಂದ ಏನು ಕೆಲಸವಾಗಬೇಕೆಂದು ಪ್ರಶ್ನಿಸುವರು. ರಂಗಾಚಾರ್ಯರು ಇಂಗ್ಲೆಂಡ್ ಐರ್ಲೆಂಡ್ ದೇಶಗಳ ಸ್ಥಿತಿ ಗತಿಗಳನ್ನು ವಿಚಾರಿಸಿ, ತಮ್ಮ ಸಲಹೆಗಳನ್ನೂ ಅಭಿಪ್ರಾಯ ಗಳನ್ನೂ ಸೂಚಿಸುವರು. ಅದೇ ರೀತಿ ಸ್ವದೇಶೀಯ ಸ್ನೇಹಿತರು

ದೇಶಾಭ್ಯುದಯಕ್ಕಾಗಿ ತಾವು ಮಾಡಬೇಕೆಂದಿರುವ ಕಾರ್ಯಗಳನ್ನು ವಿವರಿಸುವರು. ರಂಗಾಚಾರ್ಯರು ತಮ್ಮ ಅನುಭವ ಸಿದ್ಧಾಂತಗಳನ್ನು ಅವರಿಗೆ ತಿಳಿಯಪಡಿಸುವರು. ಈ ರೀತಿ ಬೆಳದ ಕಾಗದಗಳು ನೂರಾರಿವೆ. ಅದರಿಂದ ರಂಗಾಚಾರ್ಯರ ಮನಸ್ಸು ಹೇಗೆ ಸರ್ವದಾ ಮಹದ್ವಿಚಾರ ಗಳಲ್ಲಿ ಪ್ರವೃತ್ತವಾಗಿತ್ತೆಂಬುದು ಗೊತ್ತಾಗುತ್ತದೆ.

ರಂಗಾಚಾರ್ಯರ ಚಟುವಟಿಕೆಯು ಹುಟ್ಟುಗುಣವಾಗಿ ಬಂದಿದ್ದುದು. ಅವರು ಸೋಮಾರಿತನದಿಂದ ಅಥವಾ ಪಾಲುಮಾರಿಕೆಯಿಂದ ಇದ್ದ ಸಮಯವೇ ಇಲ್ಲವೆಂದು ತೋರುತ್ತದೆ. ಅವರ ಬುದ್ಧಿವ್ಯಾಪಾರವು ಎಷ್ಟು ಸೂಕ್ಷ್ಮವೋ, ಅವರ ದೇಹವ್ಯಾಪಾರವೂ ಅಷ್ಟು ತೀವ್ರವಾದುದು. ಒಂದು ಗಳಿಗೆಯಾದರೂ ಅವರು ಸುಮ್ಮನಿರುತ್ತಿರಲಿಲ್ಲ. ಕಾರ್ಯಾವಸರದಲ್ಲಿ ಅವರು ಆಹಾರ ನಿದ್ರೆಗಳನ್ನೂ ಲಕ್ಷ್ಯಕ್ಕೆ ತರುತ್ತಿರಲಿಲ್ಲ. ಅವರು ಗ್ರಾಮಾಂತರ ಹೊರಡಬೇಕಾದರೆ ಹಾಸಿಕೆ ಹೊದ್ದಿಕೆಗಳು ಹೀಗೆಯೇ ಇರಬೇಕೆಂಬ ಕಟ್ಟುಪಾಡೂ, ಕಾಲನಿಯಮವೂ ಯಾವುದೂ ಇರಲಿಲ್ಲ. ಕರ್ತವ್ಯದ ಮುಂದೆ ಯಾವುದೂ ನಿಲ್ಲುತ್ತಿರಲಿಲ್ಲ.

ರಂಗಾಚಾರ್ಯರ ದೇಶಾಭಿಮಾನವು ಹೃದಯಜನಿತವಾದುದು. ನಮ್ಮ ದೇಶದ ಪುರಾತನ ಮಹತ್ತ್ವವನ್ನು ಅವರು ಚೆನ್ನಾಗಿ ತಿಳಿದುಕೊಂಡಿದ್ದರು. ವಿದ್ಯೆ, ನೀತಿ, ಕೃಷಿ, ಕಲೆ, ವಾಣಿಜ್ಯ ಮೊದಲಾದ ಎಲ್ಲಾ ವಿಷಯಗಳಲ್ಲಿಯೂ ಪ್ರಾಚೀನ ಭರತವರ್ಷವು ತುಂಬಾ ಮುಂಬರಿದಿತ್ತೆಂತಲೂ, ನಮ್ಮ ಪೂರ್ವಿಕರಾದ ಆರ್ಯರು ನಾಗರಿಕತೆಯಲ್ಲಿ ಮುಗಿಲುಮುಟ್ಟಿದ್ದರೆಂತಲೂ ರಂಗಾಚಾರ್ಯರು ತಿಳಿದಿದ್ದರು. ಅವರ ಎಲ್ಲಾ ಅಭಿಪ್ರಾಯಗಳಿಗೂ, ಕಾರ್ಯಗಳಿಗೂ ಆ ನಂಬಿಕೆಯೇ ಆಧಾರವಾಗಿದ್ದಿತು. ನಮ್ಮ ದೇಶವನ್ನುದ್ಧಾರಮಾಡುವ ಕಾರ್ಯವು ರಂಗಾಚಾರ್ಯರ ಕಾಲದಲ್ಲಿಯೇ, ಸ್ವಲ್ಪ ಹೆಚ್ಚು ಕಡಮೆ ಅವರ ವಯಸ್ಸಿನ ಮತ್ತು ಅವರಷ್ಟು ಯೋಗ್ಯತೆಯುಳ್ಳ ದೇಶಾಭಿಮಾನಿಗಳಿಂದಲೇ, ನಾನಾ ಮುಖವಾಗಿಪ್ರಾರಂಭವಾಯಿತು. ಇದುವರೆಗೂ ನಡೆದುಬರುತ್ತಿರುವ ಆ ದೇಶೋದ್ಧಾರ ಕಾರ್ಯಕ್ಕೆ ರಂಗಾಚಾರ್ಯರು

ತಮ್ಮ ಕೈಯಿಂದಾದ ಸಾಹಾಯ್ಯವನ್ನು ಮನಃಪೂರ್ವಕವಾಗಿ ಮಾಡಿರುವರು. ದೇಶಾಭಿಮಾನಿಗಳಾದವರು ದೊಡ್ಡ ಪದವಿಗೆ ಬಂದರೆ ದೇಶಾಭ್ಯುದಯಕ್ಕಾಗಿ ಅವರು ಏನೇನು ಮಾಡಬಹುದೆಂಬುದನ್ನು ರಂಗಾಚಾರ್ಯರು ದೃಷ್ಟಾಂತ ಸಹಿತವಾಗಿ ತೋರಿಸಿಕೊಟ್ಟಿರುವರು. ರಾಜ್ಯಾಧಿಕಾರಿಯಾಗಿ ಸಂಬಳಕ್ಕೆ ಕೆಲಸಮಾಡುವವನು ನಿಶ್ಚಯವಾಗಿ ಯೂ ಪ್ರಜೋಪಕಾರಿಯಾಗಿರಬಹುದೆಂಬುದಕ್ಕೆ ರಂಗಾಚಾರ್ಯರೇ ದೊಡ್ಡ ನಿದರ್ಶನ.

ಲೋಕಹಿತಕ್ಕೆ ಸಂಬಂಧಪಟ್ಟ ವಿಷಯಗಳನ್ನು ಕುರಿತು ಜಾಗ ರೂಕತೆಯಿಂದಲೂ, ಸಾವಧಾನದಿಂದಲೂ, ದೂರದೃಷ್ಟಿಯಿಂದಲೂ ಆಲೋಚನೆ ಮಾಡಿ, ತಮ್ಮ ಸಿದ್ಧಾಂತಗಳನ್ನು ಇತರರ ತಿಳಿವಳಿಕೆ ಗಾಗಿ ಪ್ರಕಟಗೊಳಿಸುವುದು ರಂಗಾಚಾರ್ಯರಿಗೆ ಸ್ವಾಭಾವಿಕವಾಗಿ ಬಂದಿದ್ದ ಗುಣವೆಂಬುದು ಇದುವರೆಗೇ ವಾಚಕರಿಗೆ ತೋರಿರಬಹುದು. ದೇಶಭಕ್ತಿಯನ್ನನುಷ್ಠಿಸಲು ಅನೇಕ ದಾರಿಗಳುಂಟು: ಕೆಲವರು ಬಾಹುಬಲದಿಂದ ದೇಶಸೇವೆ ಮಾಡುವರು; ಕೆಲವರು ಧನಧಾನ್ಯ ದಾನದ ಮೂಲಕ ದೇಶಸೇವೆ ಮಾಡುವರು; ಕೆಲವರು ಕಸಬುಗಳ ಅಥವಾ ವರ್ತಕತನದ ಮೂಲಕ ದೇಶಸೇವೆ ಮಾಡುವರು; ಕೆಲವರು ಬುದ್ಧಿಶ್ರಮದ ಮೂಲಕ ದೇಶಸೇವೆ ಮಾಡುವರು. ಈ ಕಡೆಯ ತೆರದ ಸೇವೆಯು ಹೇಗೆ ಸರ್ವೋತ್ಕೃಷ್ಟವೋ ಹಾಗೆ ಬಹು ಕಷ್ಟ ಸಾಧ್ಯವಾದುದೂ ಹೌದು. ಬಳಲದೆ, ಬೇಸರದೆ, 'ಊರ ಚಿಂತೆ' ಯಲ್ಲಿ ಮಗ್ನನಾಗಿ, ಆ ಚಿಂತನೆಯ ಫಲಿತಾಂಶಗಳನ್ನು ನಿರ್ಭಯ ವಾಗಿ ಪ್ರಚಾರಗೊಳಿಸುವುದು ದೇಶಾಭಿಮಾನಿಯ ಲಕ್ಷಣ. ಈ ಭಾಗದಲ್ಲಿ ರಂಗಾಚಾರ್ಯರು ಮಾಡಿರುವ ಕೆಲಸವು ಇಷ್ಟಿಷ್ಟೆಂದು ಹೇಳಲಾಗುವುದಿಲ್ಲ: ಬೆಂಗಳೂರು ಅಠಾರಾಕಛೇರಿಯ ಹಳೆಯ ದಫ್ತರಗಳನ್ನು ಹುಡುಕಿದರೆ, ರಂಗಾಚಾರ್ಯರ ಲೇಖನಿಯು ಹೇಗೆ ಅವಿಚ್ಛಿನ್ನವಾಗಿ ನಡೆದು, ಈ ಕಾಲದವರ ಉಪಯೋಗಕ್ಕಾಗಿ, ರಾಜ್ಯ ಕ್ಷೇಮಕ್ಕೆ ಸಂಬಂಧಿಸಿದ ನಾನಾ ವಿಷಯಗಳ ಮೇಲೆ ಅಮೂಲ್ಯ ವಾದ ಪ್ರಬಂಧ ರಾಶಿಯನ್ನು ನಿರ್ಮಿಸುತ್ತಿತ್ತೆಂಬುದು ನಿಸ್ಸಂಶಯ

ವಾಗಿ ಕಂಡುಬರುವುದು. ಅವರ ಪ್ರಬಂಧಗಳಲ್ಲಿನ್ನೆರಡನ್ನು ಇಲ್ಲಿ ಉದಾಹರಿಸಬಹುದು:—(೧) "ಲೈಫ್ ಇನ್ಶೂರೆನ್ಸ್" ಅಥವಾ ಜೀವ ವಿಮೆಯ ಪದ್ಧತಿಯನ್ನು ಸರಕಾರವು ಜನರಲ್ಲೆಲ್ಲಾ ಪ್ರಚಾರಗೊಳಿಸ ಬೇಕೆಂಬುದೊಂದು. ಈ ದೇಶದಲ್ಲಿ ಜನರು ಬಗೆಬಗೆಯಾಗಿ ದುಂದು ವೆಚ್ಚಮಾಡಿ, ದಾರಾಪುತ್ರಾದಿಗಳ ವಿಷಯದಲ್ಲಿ ತಾವು ಆಚರಿಸ ಬೇಕಾದ ಕರ್ತವ್ಯಗಳನ್ನು ಮರೆಯುವ, ಅಥವಾ ಅವುಗಳನ್ನು ನೆರವೇ ರಿಸಲಶಕ್ತರಾಗುವ, ದುರಭ್ಯಾಸವನ್ನು ರಂಗಾಚಾರ್ಯರು ಕಂಡು ಕೊಂಡಿದ್ದರು. ಅದಕ್ಕೆ ಪ್ರತೀಕಾರವಮಾಡಲು ಜೀವವಿಮೆಯ ಏರ್ಪಾಡು ಸದುಪಾಯವೆಂದೂ ಸರಕಾರವೇ ಅದನ್ನು ಜಾರಿಗೆ ತರಬಹುದೆಂದೂ ಅವರ ಅಭಿಪ್ರಾಯ. (೨) ನಮ್ಮ ಮುಜರಾಯಿ (ದೇವಾಲಯ ಮಠ ಸತ್ರ ಮೊದಲಾದ) ಸಂಸ್ಥೆಗಳ ಆಡಳಿತಕ್ಕಾಗಿ ಸರಕಾರವು ಧರ್ಮದರ್ಶಿ ಸಭೆಗಳನ್ನೇರ್ಪಡಿಸಬೇಕೆಂದೂ, ಆ ಧರ್ಮದರ್ಶಿಗಳು ಕೋರ್ಟುಗಳ ಮೂಲಕ ನಿಯಮಿಸಲ್ಪಡಬೇಕೆಂದೂ, ಅವರು ತಮ್ಮ ಕರ್ತವ್ಯಗಳಲ್ಲಿ ತಪ್ಪಿದರೆ ಸಿವಿಲ್ ಕೋರ್ಟುಗಳಲ್ಲಿ ದಾವಾ ನಡೆಯಲು ಅವಕಾಶ ವಿರಬೇಕೆಂದೂ, ಧರ್ಮದರ್ಶಿ ಸಭೆಗಳ ಮೇಲ್ವಿಚಾರಣೆಗಾಗಿ ಸರಕಾರವು "ಸೆಂಟ್ರಲ್ ಕಮಿಟಿ"ಗಳನ್ನು ಪ್ರತಿ ಡಿಸ್ಟ್ರಿಕ್ಟಿಗೂ ಏರ್ಪಡಿಸ ಬೇಕೆಂದೂ ಉಪಪಾದಿಸಿರುವುದೊಂದು. ನಮ್ಮ ಮಠ ಸತ್ರ ದೇವಾಲಯಗಳ ಅವ್ಯವಸ್ಥೆಯನ್ನು ಹೋಗಲಾಡಿಸುವುದಕ್ಕಾಗಿ ಈ ಉಪಾಯವನ್ನು ನಡೆಸಲು ತಕ್ಕ ಕಾನೂನನ್ನು ರಚಿಸಬೇಕೆಂದು ಅವರು ಅಭಿಪ್ರಾಯಪಟ್ಟಿದ್ದರು.*

ರಂಗಾಚಾರ್ಯರು ಇನಾಂ ಕಮಿಷನರಿಗೆ ಸಹಾಯಕ ರಾಗಿದ್ದಾಗ ಗ್ರಾಮಪಂಚಾಯತಿಗಳನ್ನು ಪುನರುಜ್ಜೀವನಗೊಳಿಸುವ ವಿಷಯದಲ್ಲಿ† ಒಂದು ವಿಸ್ತಾರವಾದ ಲೇಖನವನ್ನು ಬರೆದಿದ್ದರು. ಹಳ್ಳಿ ಊರುಗಳ ಪಾರಿಶುದ್ಧ್ಯ, ಆರೋಗ್ಯ, ದಾರಿಗಳು, ದೀಪಗಳು ಮೊದಲಾದ

---

* ಈ ಎರಡು ವಿಷಯಗಳಲ್ಲಿಯೂ ಮೈಸೂರು ಸರಕಾರದವರು ರಂಗಾಚಾರ್ಯರ ಕಾಲದಿಂದ ಈಚೆಗೆ ಪ್ರವರ್ತಿಸಿರುವರು.

† ಈ ವಿಷಯಕ್ಕೂ ಈಚೆಗೆ ಮೈಸೂರು ಸರಕಾರದವರು ಗಮನಕೊಟ್ಟಿರುವರು.

ಸಣ್ಣ ಸಣ್ಣ ಕೆಲಸಗಳನ್ನು ಸರಕಾರವು ಸರಿಯಾಗಿ ಎಂದಿಗೂ ನೆರವೇರಿಸ ಲಾರದು. ಆ ಕೆಲಸಗಳನ್ನು ಆಯಾ ಸ್ಥಳಗಳ ನಿವಾಸಿಗಳೇ ನೋಡಿಕೊಳ್ಳ ಬೇಕು. ಅದರಂತೆಯೇ, ಗ್ರಾಮಗಳಲ್ಲಿ ನಡೆಯುವ ಚಿಲ್ಲರೆ ವ್ಯಾಜ್ಯಗಳೆಲ್ಲಾ ಸರಕಾರೀ ಕೋರ್ಟುಗಳಲ್ಲಿಯೇ ಫೈಸಲಾಗಬೇಕೆಂದರೆ, ವಿವಾದಸ್ಥ ರಿಗೆ ದ್ರವ್ಯ ನಷ್ಟವೂ ಕಾಲ ನಷ್ಟವೂ ಆಗುವುದಲ್ಲದೆ, ''ಜಿದ್ದು'' ಅಥವಾ ಹಠವು ಹೆಚ್ಚಿ, ಗ್ರಾಮಸ್ಥರಲ್ಲಿ ಕಕ್ಷಿ ಪ್ರತಿಕಕ್ಷಿಗಳಾಗಿ, ಗ್ರಾಮಗಳ ಐಕಮತ್ಯಕ್ಕೂ ಹಾನಿ ಬರುವುದು. ಇದಕ್ಕೆ ಪ್ರತಿಯಾಗಿ ಗ್ರಾಮ ಸಭೆಗಳನ್ನೇರ್ಪಡಿಸಿ, ಸ್ಥಳೀಯ ಕಾರ್ಯಗಳ ಭಾರವನ್ನು ಅವುಗಳಿ ಗೊಪ್ಪಿಸಿ, ಗ್ರಾಮದ ನ್ಯಾಯವಿಮರ್ಶಾ ಕಾರ್ಯವನ್ನು ಮರ್ಯಾ ದಸ್ಥರಾದ ಪಂಚಾಯತದಾರರಿಗೆ ಬಿಟ್ಟರೆ, ಆ ಜವಾಬ್ದಾರಿಗಳು ತೃಪ್ತಿ ಕರವಾಗಿ ನಿರ್ವಹಿಸಲ್ಪಡುವುವು. ಮತ್ತು ಗ್ರಾಮಸ್ಥರಲ್ಲಿ ಸ್ಥಳಾಭಿ ಮಾನವೂ ಸಭ್ಯತೆಯೂ ಹೆಚ್ಚಿ, ಗಣ್ಯರೂ ಮಾನ್ಯರೂ ಆಗಬೇಕೆಂಬ ಬುದ್ಧಿಯು ಅವರಲ್ಲಿ ಹುಟ್ಟುವುದು. ಇದು ರಂಗಾಚಾರ್ಯರ ಅಭಿ ಪ್ರಾಯ.

ರಂಗಾಚಾರ್ಯರ ಪತ್ರ ಲೇಖನದ ಬಗೆಯನ್ನು ತೋರಿಸಲು ಒಂದು ಉದಾಹರಣೆಯನ್ನು ಕೊಡಬಹುದು :—

(೧) ತಮ್ಮ ಮಿತ್ರರಾದ ಜಿ. ಎಸ್. ಟೇಲರವರು ಸೀಮೆಗೆ ಹೋಗಿದ್ದಾಗ ಅವರಿಗೆ ರಂಗಾಚಾರ್ಯರು ಬರೆದ ಒಂದು ಕಾಗದದ ಸಾರಾಂಶವೇನೆಂದರೆ:—''ಈ ದೇಶದಲ್ಲಿ ಬ್ರಿಟಿಷ್ ಸರಕಾರವು ತಾನು ಹೇಗೆ ನಡೆದುಕೊಳ್ಳಬೇಕೆಂಬುದನ್ನರಿಯಲಾರದೆ, ಪುರಾತನವಾಗಿ ಬಂದಿ ರುವ ಏರ್ಪಾಟುಗಳನ್ನು ಕಿತ್ತುಹಾಕುತ್ತಲೂ, ಅವುಗಳ ಸ್ಥಾನದಲ್ಲಿ ತಕ್ಕ ಹೊಸ ಏರ್ಪಾಟುಗಳನ್ನು ಮಾಡಲರಿಯದೆಯೂ ಚಂಚಲವಾಗಿದೆ. ಈ ದೇಶದ ಆದಾಯವ್ಯಯಗಳ ಏರ್ಪಾಟುಗಳನ್ನು ವಿಚಾರಿಸಿ ನಿಷ್ಕರ್ಷಿಸಲು ಇಂಗ್ಲೆಂಡಿನಲ್ಲಿ ನಿಯಾಮಕವಾಗಿರುವ ಸಭೆಯು ದೇಶೀಯಾಭಿಪ್ರಾಯ ವನ್ನು ತಿಳಿದುಕೊಳ್ಳದಿದ್ದರೆ ಸಾರ್ಥಕವಾಗದು. ಅದರ ತಿಳಿವಳಿಕೆಗಾಗಿ ನಾನು ವರ್ತಮಾನಪತ್ರಿಕೆಗಳಲ್ಲಿ ಕೆಲವು ವ್ಯಾಸಗಳನ್ನು ಬರೆಯಬೇಕೆಂದಿ ದ್ದೇನೆ. ನಮ್ಮನ್ನಾಳಲು ಬರುವ ಗವರ್ನರುಗಳೂ, ಗವರ್ನರ್–ಜನರಲ್

ಗಳೂ ರಾಜ್ಯತಂತ್ರ ಕುಶಲರಾಗಿ, ಪ್ರಜೆಗಳೊಡನೆ ಬೆರೆಯುವವರಾಗಿರ ಬೇಕು ; ಸುಮ್ಮನೆ ದಿನಗಳನ್ನೆಣಿಸಿಕೊಂಡಿದ್ದು ಹೊರಟುಹೋಗುವವ ರಾದರೆ ಸಾಲದು. ಇಂಗ್ಲೆಂಡಿನ ರಾಜಕೀಯ ವಿದ್ಯಮಾನಗಳೂ ಈಗ ಅಸಮಾಧಾನ ಸ್ಥಿತಿಯಲ್ಲಿವೆ. ಐರ್ಲೆಂಡಿಗೆ ಬೇಕಾದುದು ಇಂಗ್ಲೆಂಡಿ ನವರ ವರಪ್ರಸಾದಗಳಲ್ಲ ; ರಾಜಕೀಯ ಸ್ವಾತಂತ್ರ್ಯ. ಐರಿಷ್ ಜನರು ಪ್ರತ್ಯೇಕವಾದ ಶಾಸನ ಸಭೆಗಳನ್ನು ಏರ್ಪಾಡುಮಾಡಿಕೊಂಡು— ಇಂಗ್ಲಿಷ್ ಪಾರ್ಲಿಮೆಂಟಿನ ಮೇಲ್ವಿಚಾರಣೆಗೆ ಮಾತ್ರ ಒಳಪಟ್ಟು— ತಮ್ಮ ಆಡಳಿತಗಳನ್ನು ತಾವೇ ನಡೆಸಿಕೊಳ್ಳುವಂತಾಗಬೇಕು.* ಬ್ರಿಟಿಷ್ ಪಾರ್ಲಿಮೆಂಟ್ ಸಭೆಯ "ಹೌಸ್ ಆಫ್ ಲಾರ್ಡ್ಸ್" ಎಂಬ ಶ್ರೀಮಂತ† ಶಾಖೆಯು ಮಾರ್ಪಾಡು ಹೊಂದಿ, ಇಂಗ್ಲಿಷ್ ಶ್ರೀಮಂತ ರಿಂದ ಚುನಾಯಿಸಲ್ಪಟ್ಟ ಪ್ರತಿನಿಧಿಗಳೂ, ಅನುಭವದಾರರಾದ (ರಿಟೈರ್ಡ್) ಜಡ್ಜಿ ಗವರ್ನರುಗಳೂ ಅದರಲ್ಲಿ ಸೇರುವಂತಾಗಬೇಕು. ಇಂಗ್ಲಿಷ್ ರಾಜ್ಯಕಾರ್ಯ ಕರ್ತರಲ್ಲಿ ಈಗ ಕಕ್ಷಿಗಳು ಪ್ರಬಲಿಸಿ, ವೃಥಾ ಬದಲಾವಣೆಗಳು ನಡೆಯುತ್ತಿವೆ."

ವಿಸ್ಮಯವನ್ನುಂಟುಮಾಡತಕ್ಕುವಲ್ಲವೆ ಇಲ್ಲಿ ಕಾಣುವ ದೂರ ದರ್ಶನ ಪ್ರಜಾಭಿಮಾನಗಳು ? ಈ ಪರಿಯಾಗಿ ಅದ್ಭುತವಾದ ಲೋಕ ಹಿತೋತ್ಸಾಹದಿಂದಲೂ ಪ್ರತಿಭಾತಿಶಯದಿಂದಲೂ ವಿರಾಮ ತೆಗೆದು ಕೊಳ್ಳದೆ ಕೆಲಸಮಾಡುತ್ತಿದ್ದ ರಂಗಾಚಾರ್ಯರು ಕ್ರಿ. ಶ. ೧೮೮೨ನೆಯ ವರ್ಷದ ಕೊನೆಯ ಭಾಗದಲ್ಲಿ ದೇಹಾಲಸ್ಯ ಹೊಂದಿ, ವಿಶ್ರಾಂತಿಗಾಗಿ ಮದರಾಸಿಗೆ ಹೋಗಿ, ಕಡೆಗೆ ಮೈಸೂರಿನವರ ದುರದೃಷ್ಟದಿಂದ ಅಲ್ಲಿ ೧೮೮೩ನೆಯ ಜನವರಿ ೨೦ರಲ್ಲಿ ಇಹಲೋಕವನ್ನು ತ್ಯಜಿಸಿದರು.

---

* ಐರ್ಲೆಂಡು ದ್ವೀಪವು ಈಗ ಸ್ವತಂತ್ರ ರಾಷ್ಟ್ರವಾಗಿದೆ.

† ಈ ಶ್ರೀಮಂತ ಶಾಖೆಯನ್ನು ಪರಿಷ್ಕರಿಸುವ ವಿಚಾರವು ಈಗಲೂ ಚರ್ಚೆ ಯಲ್ಲಿದೆ.

# ಪರಿಚ್ಛೇದ ೧೨

## ಅವರ ಕಾಲ—ಅವರ ಸಮಕಾಲಿಕರ ಅಭಿಪ್ರಾಯಗಳು

"ಕಾಲೋ ಹಿ ದುರತಿಕ್ರಮಃ"

ರಂಗಾಚಾರ್ಯರ ಕಾಲವನ್ನು ಭಾರತೀಯರಿಗೊದಗಿದ್ದ ಒಂದು ಪರೀಕ್ಷಾ ಕಾಲವೆಂದು ಹೇಳಬಹುದು. ಇಂಡಿಯಾದೇಶೀಯರು ಬುದ್ಧಿಕುಶಲತೆಯಲ್ಲಿ ಇತರ ದೇಶಗಳವರಿಗೆ ಸಮಾನರೆ, ಅಲ್ಲವೆ?—ಇತರರಿಗೆ ಸರಿಯಾಗಿ ತಲೆಯೆತ್ತಿ ನಿಂತು, ಸಂಪತ್ತಿನಲ್ಲಿಯೂ ನಾಗರಿಕತೆಯಲ್ಲಿಯೂ ಅಭಿವೃದ್ಧಿ ಹೊಂದಲು ನಮ್ಮವರಿಗೆ ಯೋಗ್ಯತೆಯುಂಟೆ, ಇಲ್ಲವೆ?—ಎಂಬ ಪ್ರಶ್ನೆಗೆ ಉತ್ತರ ಕೊಡುವುದೇ ಆಗಿನವರಿಗೆ ದೈವವು ನಿಯಮಿಸಿದ್ದ ಕೆಲಸವೆಂಬಂತೆ ತೋರುತ್ತದೆ. ಇಂಗ್ಲಿಷ್ ಭಾಷೆಯು ಈ ದೇಶದಲ್ಲಿ ಹರಡಲು ಆಗತಾನೆ ಪ್ರಾರಂಭವಾಗಿತ್ತು. ಆಗ ಐರೋಪ್ಯ ವಿದ್ಯೆಗಳನ್ನು ಕಲಿತ ಭಾರತೀಯರನೇಕರು ನಾನಾ ವಿಧಗಳಲ್ಲಿ ಸಮರ್ಥರೆನ್ನಿಸಿಕೊಂಡು, ಯಾವ ವಿಷಯದಲ್ಲಿಯೂ ತಾವು ಇತರ ದೇಶಗಳವರಿಗೆ ಕಡಮೆಯಲ್ಲವೆಂಬುದನ್ನು ತೋರಿಸಿಕೊಟ್ಟರು. ಹೀಗೆ ಪಾಶ್ಚಾತ್ಯರ ಮುಂದೆ ಭಾರತೀಯ ಬುದ್ಧಿಶಕ್ತಿಯನ್ನೂ, ಉತ್ತಮ ಗುಣಗಳನ್ನೂ ಪ್ರಕಾಶಪಡಿಸಿ, ದೇಶೀಯರ ಗೌರವವನ್ನುಳಿಸಿ, ಅವರ ಆತ್ಮೋದ್ಧರಣ ಪ್ರಯತ್ನಕ್ಕೆ ಮೂಲಸ್ತಂಭವನ್ನು ನೆಟ್ಟವರಲ್ಲಿ ನಮ್ಮ ರಂಗಾಚಾರ್ಯರು, ಅನಂತಶಯನದ ರಾಜಾ ಸರ್ ಟಿ. ಮಾಧವ ರಾಯರು, ಹೈದರಾಬಾದಿನ ಸರ್ ಸಾಲಾರ್ ಜಂಗರು, ಪುದುಕೋಟೆಯ ಸರ್ ಎ. ಶೇಷಯ್ಯಶಾಸ್ತ್ರಿಗಳು, ಇಂದೂರಿನ ದಿನಕರರಾಯರು—ಇವರೇ ಮೊದಲಾದ ರಾಜ್ಯಕಾರ್ಯ ವಿಚಕ್ಷಣರೂ; 'ಸ್ವರಾಜ್ಯ' ಮತಬೋಧಕರಾದ ದಾದಾಭಾಯಿ ನರೋಜಿಯವರೇ ಮೊದಲಾದ ಪ್ರಜಾ ವಾದ ಚತುರರೂ; ಕಾಶೀನಾಥ ತ್ರ್ಯಂಬಕ ತಿಲಂಗ್, ಮಹಾದೇವ ಗೋವಿಂದ ರ್‍ಯಾನಡೆ, ಬದ್ರುದ್ದೀನ್ ತಯಾಬ್ಜಿ, ಸರ್ ಟಿ. ಮುತ್ತುಸ್ವಾಮಿ ಅಯ್ಯರ್, ಸರ್ ರಾಮೇಶಚಂದ್ರಮಿತ್ರ, ದ್ವಾರಕಾನಾಥಮಿತ್ರ ಮುಂತಾದ ನ್ಯಾಯಶಾಸ್ತ್ರ ನಿಪುಣರೂ; ರಾಜೇಂದ್ರ

ಲಾಲಮಿತ್ರ, ಈಶ್ವರಚಂದ್ರ ವಿದ್ಯಾಸಾಗರ ಮುಂತಾದ ಪಂಡಿತರೂ ವಿಖ್ಯಾತರಾದವರು.

ಆ ಕಾಲದಲ್ಲಿ ಪಾಶ್ಚಾತ್ಯ ದೇಶಗಳಲ್ಲಿಯೂ ಸಹ ಇಂಗ್ಲೆಂಡಿನ ಗ್ಲ್ಯಾಡ್‌ಸ್ಟನ್, ಲಾರ್ಡ್ ಸ್ಯಾಲಿಸ್ಬರಿ, ಡಿಸ್ರಯೆಲಿ ಎಂಬ ಸಚಿವರೂ; ಇಟಲಿಯ ಕವೂರ್, ಜರ್ಮನಿಯ ಬಿಸ್ಮಾರ್ಕ್, ಅಮೆರಿಕದ ಲಿಂಕನ್ ಮೊದಲಾದ ಲೋಕಪ್ರಖ್ಯಾತ ರಾಜ್ಯತಂತ್ರಜ್ಞರೂ; ಮೆಜ್ಜಿನಿ, ಗ್ಯಾರಿಬಾಲ್ಡಿ ಮುಂತಾದ ದೇಶಭಕ್ತಶಿರೋಮಣಿಗಳೂ; ಟೆನ್ನಿಸನ್, ಬ್ರೌನಿಂಗ್ ಮುಂತಾದ ಕವಿಶ್ರೇಷ್ಠರೂ; ಡಾರ್ವಿನ್, ಹರ್ಬರ್ಟ್ ಸ್ಪೆನ್ಸರ್ ಮುಂತಾದ ವಿಜ್ಞಾನಶಾಸ್ತ್ರ ಶೋಧಕರೂ ಇದ್ದರು. ಈ ಮಹಾಪುರುಷರು ಜನ ಜನಾಂಗಗಳ ವೃದ್ಧಿ ಹಾನಿಗಳ ರೀತಿಗಳನ್ನೂ ಭೌತಿಕ ಪ್ರಪಂಚದಲ್ಲಿಯ ಪದಾರ್ಥಗಳ ರಚನೆ ಜೀವನಗಳ ರೀತಿಗಳನ್ನೂ ಸೂಕ್ಷ್ಮದೃಷ್ಟಿಯಿಂದ ವಿಮರ್ಶೆಮಾಡಿ, ಹೊಸ ಹೊಸ ರಹಸ್ಯಾಂಶಗಳನ್ನು ಕಂಡುಹಿಡಿದು, ಮಾನವ ಲೋಕದ ನೀತಿ ವ್ಯವಸ್ಥೆಗಳಲ್ಲಿ ಹೊಸ ಪರಿಷ್ಕಾರಗಳನ್ನು ನಡೆಯಿಸಲು ದಾರಿಮಾಡುತ್ತಿದ್ದರು. ಇವರ ಅಭಿಪ್ರಾಯ ಬೋಧನೆಗಳಿಗನುಸಾರವಾಗಿ, ಎಲ್ಲೆಲ್ಲಿಯೂ ಜನರ ಮನೋವೃತ್ತಿ ಭಾವನೆಗಳು ಪರಿವರ್ತನೆ ಹೊಂದಲು ಮೊದಲಾಯಿತು. ಆ ಭಾವ ಪರಿವರ್ತನೆಯನ್ನು ಇಂಡಿಯಾದೇಶದಲ್ಲಿ ಪ್ರಚುರಗೊಳಿಸಲು ಭಾರತೀಯರಲ್ಲಿ ಮೊದಮೊದಲು ಆಂಗ್ಲ ವಿದ್ಯಾರ್ಜನೆ ಮಾಡಿದವರಾದ ರಂಗಾಚಾರ್ಯರು ಪ್ರಭೃತಿಗಳು ಸಾಧನರಾದರು. ಆ ಮಹನೀಯರಲ್ಲಿ, ಕೆಲವರು ರಾಜಕೀಯ ಸಂಸ್ಕಾರ ಸಂಪಾದನೆಗೆ ಕೈ ಹಾಕಿದರು; ಕೆಲವರು ಪೂರ್ವಚರಿತ್ರೆಯನ್ನು ಕಂಡುಹಿಡಿದು ಬರೆಯಲು ಪ್ರಯತ್ನಪಟ್ಟರು; ಮತ್ತೆ ಕೆಲವರು ಸಮಾಜವನ್ನು ಪರಿಷ್ಕಾರಗೊಳಿಸ ಹೊರಟರು; ಇನ್ನು ಕೆಲವರು ಸಂಪದಭಿವೃದ್ಧಿ ಮಾರ್ಗಗಳನ್ನು ಹುಡುಕಿದರು; ಇನ್ನು ಕೆಲವರು ವಿದ್ಯಾಪ್ರಚಾರಕ್ಕೆ ಯತ್ನಮಾಡಿದರು. ಈ ರೀತಿ ನಾನಾಮುಖವಾಗಿ ಪ್ರಾರಂಭವಾದ ಭಾರತೀಯ ಜಾನಪದದ ಆತ್ಮೋದ್ಧರಣ ಸಮಾರಂಭದಲ್ಲಿ

ರಂಗಾಚಾರ್ಯರೂ ಪ್ರಮುಖರಾಗಿದ್ದರೆಂದು ಬಾಯಿಬಿಟ್ಟು ಹೇಳು ವುದು ಅನವಶ್ಯಕ.

ಅದು ಪರೀಕ್ಷಾಕಾಲವಾದರೂ, ಅದಕ್ಕೆ ತಕ್ಕ ಆನುಕೂಲ್ಯ ಗಳನ್ನು ಕಾಲಪುರುಷನೇ ಒದಗಿಸಿದ್ದನು. ಅದು ಇಂಡಿಯಾದೇಶದ ಲ್ಲೆಲ್ಲಾ ಮನಃಸಂಕ್ಷೋಭೆಯ ಸಮಯ. ದೊಡ್ಡ ಶಿಪಾಯಿ ದಂಗೆಯು ನಡೆದಾಗ (೧೮೫೭) ರಂಗಾಚಾರ್ಯರು ೨೫ ವರ್ಷ ವಯಸ್ಸಿನವ ರಾಗಿ, ಲಂಚವನ್ನು ತಪ್ಪಿಸುವ ಉಪಾಯಗಳನ್ನು ಕುರಿತ ವ್ಯಾಸ ವನ್ನು ಬರೆದಿದ್ದರು. ಅಂದಿಗೆ ೫-೬ ವರ್ಷಗಳ ಹಿಂದೆಯೇ ಜನರ ರಾಜಕೀಯ ಅಸಮಾಧಾನವು ಮದ್ರಾಸಿನಲ್ಲಿ ಗೋಚರವಾಗಿತ್ತು. ೧೮೫೨ರಲ್ಲಿಯೇ "ಮದ್ರಾಸು ದೇಶೀಯ ಸಂಘ" ಎಂಬ ಸಭೆಯು ಸ್ಥಾಪಿತವಾಗಿ, ಆಡಳಿತದ ಅವಿವೇಕಗಳನ್ನೂ ಪ್ರಜೆಗಳ ಕಷ್ಟಾನಿಷ್ಟ ಗಳನ್ನೂ ದೀರ್ಘವಾದ ಬಿನ್ನವತ್ತಳೆಗಳ ಮೂಲಕ ಇಂಗ್ಲೆಂಡಿನ ಪಾರ್ಲಿ ಮೆಂಟಿಗೆ ವಿಜ್ಞಾಪಿಸಲು ಆರಂಭಿಸಿತ್ತು. ದೇಶಾಭಿಮಾನಿಯೂ ಮತಾಭಿ ಮಾನಿಯೂ ಆದ ಗಾಜುಲು ಲಕ್ಷ್ಮೀನರಸುಶೆಟ್ಟಿ ಎಂಬಾತನು ಈ ರಾಜಕೀಯ ಸಂಸ್ಕಾರ ಸಮಾರಂಭಕ್ಕೆ ಮುಖಂಡನಾಗಿ ನಿಂತು, ದೇಶೀಯರ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹಕನಾಗಿದ್ದನು. ಮೈಸೂರು ರಾಜ್ಯದ ಪುನರುಜ್ಜೀವನಕ್ಕೂ ಆತನು ಸಹಾಯಕನಾಗಿದ್ದನು. ಸಿ. ಪುರುಷೋತ್ತಮ ಮೊದಲಿಯಾರ್ ಎಂಬಾತನು ೧೮೬೦-೬೧ರಲ್ಲಿ ಇಂಗ್ಲೆಂಡಿಗೆ ಪ್ರಯಾಣಬೆಳಸಿ, ಇಂಡಿಯಾದೇಶದವರ ಕಷ್ಟನಿಷ್ಠುರ ಗಳನ್ನು ಬ್ರಿಟಿಷ್ ಜನರಿಗೂ, ಪಾರ್ಲಿಮೆಂಟಿಗೂ, ಅಲ್ಲಿಯ ಮಂತ್ರಿ ಗಣಕ್ಕೂ ಉಪನ್ಯಾಸಗಳ ಮೂಲಕವೂ ಪತ್ರಿಕಾಪ್ರಬಂಧಗಳ ಮೂಲಕವೂ ತಿಳಿಯಪಡಿಸಿ, ಹಿಂದೂಸ್ಥಾನದವರು ಏಕಭಾಷಾ, ಏಕಲಿಪಿಗಳನ್ನವ ಲಂಬಿಸಿ, ಐಕಮತ್ಯವನ್ನಭ್ಯಸಿಸಿ, ಸ್ವಧರ್ಮನಿರತರಾಗಿ, ಸ್ವರಾಜ್ಯ ವನ್ನು ಪಡೆಯಬೇಕೆಂದು ಉಪಪಾದಿಸಿದ್ದನು. ದೇಶೀಯ ಸಂಸ್ಥಾನ ಗಳನ್ನೂ ಅವುಗಳ ಹಕ್ಕು ಸ್ವಾತಂತ್ರ್ಯಗಳನ್ನೂ ಉಳಿಸಿಕೊಡುವ ಉದ್ದೇಶದಿಂದ ಆತನು ೨-೩ ಸಲ ವಿಲಾಯಿತಿಗೆ ಪ್ರಯಾಣಮಾಡಿ ದ್ದನು. ಈ ಸಮಾರಂಭಕ್ಕೆಲ್ಲ, ಜಾನ್ ಬ್ರೂಸ್ ನಾರ್ಟನ್ ಪ್ರಮುಖ

ರಾದ ಆಂಗ್ಲೇಯ ಮಹಾಶಯರ ಪ್ರೋತ್ಸಾಹವೂ ಉಪೋದ್ಬಲವೂ ಸಂಪೂರ್ಣವಾಗಿದ್ದುವು. ಈ ರೀತಿ ಇತರ ಪ್ರಾಂತಗಳಲ್ಲಿಯೂ ನಡೆಯುತ್ತಿತ್ತು. ಈ ನವೀನ ಭಾವನೆಗಳೂ, ನೂತನಾಭಿಪ್ರಾಯಗಳೂ ಯುವಕರಾಗಿದ್ದ ರಂಗಾಚಾರ್ಯರ ಮನಸ್ಸನ್ನು ಪ್ರವೇಶಿಸದೆ ಇದ್ದಿರಲಾರವು. ಆಮೇಲೆ, ಅವರು ಸ್ವತಂತ್ರ ರಾಜ್ಯಭಾರ ನಿರ್ವಾಹಕರಾದಾಗ, ಇಂಡಿಯಾದೇಶದಲ್ಲಿ ಲಾರ್ಡ್ ರಿಪ್ಪನ್ ಮೊದಲಾದ ಪ್ರಭುಗಳು ಪ್ರಜಾಧರ್ಮ ಪ್ರತಿಷ್ಠೆಯ ನೀತಿ ರೀತಿಗಳನ್ನು ಪ್ರಕಾಶಗೊಳಿಸುತ್ತಿದ್ದರು. ಒಂದೆರಡು ಮನೆತನಗಳ ಅಥವಾ ಒಂದೆರಡು ಜಾತಿಗಳ ಅಭಿವೃದ್ಧಿಗೆ ಮಾತ್ರವಲ್ಲದೆ,—ಸಮಸ್ತ ಪ್ರಜೆಗಳ ಸುಖ ಸ್ವಾತಂತ್ರ್ಯಗಳಿಗೂ ಲಕ್ಷ್ಯಕೊಟ್ಟು, ಅವರಲ್ಲಿ ಪರಸ್ಪರ ಸಹೋದರ ದೃಷ್ಟಿಯನ್ನು ಅಭ್ಯಾಸಮಾಡಿಸಿ, ಸರ್ವಸಮಭಾವದಿಂದ ನಡೆದು, ಜನಪದದ ಶಕ್ತಿ ಸಂಪತ್ತುಗಳನ್ನು ಜಾನಪದ ಪ್ರಯತ್ನದಿಂದಲೇ—ಎಂದರೆ ಪ್ರಜೆಗಳ ಸ್ವಂತ ಸಾಹಸ ಉತ್ಸಾಹ ಪರಿಶ್ರಮಗಳ ಮೂಲಕವೇ—ಸಂಪಾದನೆ ಮಾಡಿಸುವ ರಾಜ್ಯಪಾಲನ ಕೌಶಲವು ರಾಜಕೀಯ ನೀತಿಯಲ್ಲಿ ಪರಮೋತ್ತಮವಾದುದು. ಈ ನೀತಿಯ ಬಗೆಯನ್ನು ಕ್ಷಿಪ್ರದಲ್ಲಿ ಗ್ರಹಿಸಿ ಅನುಷ್ಠಾನಕ್ಕೆ ತಂದ ಕೀರ್ತಿಯು ರಂಗಾಚಾರ್ಯರಿಗೆ ಸೇರತಕ್ಕುದಾಗಿದೆ.

ಇಂತಹ ಮಹನೀಯರ ಮರಣಕ್ಕಾಗಿ,—ಅದು ಅವರ ಜೀವಿತ ಕಾರ್ಯವು ಮುಗಿಯುವುದಕ್ಕೆ ಮುಂಚೆ ನಡೆದಿರುವಲ್ಲಿ ಮತ್ತಷ್ಟು ಹೆಚ್ಚಾಗಿ—ಲೋಕವೆಲ್ಲವೂ ದುಃಖಿಸುವುದು ಸ್ವಾಭಾವಿಕವೇ ಸರಿ. ಇಂಡಿಯಾದೇಶದ ಎಲ್ಲಾ ಭಾಗಗಳ ಮತ್ತು ಎಲ್ಲಾ ಮತಗಳ ವರ್ತಮಾನಪತ್ರಿಕೆಗಳು ಮಾತ್ರವೇ ಅಲ್ಲದೆ, ಇಂಗ್ಲೆಂಡಿನ "ಟೈಮ್ಸ್" ಮುಂತಾದ ಮುಖ್ಯ ಪತ್ರಿಕೆಗಳೂ ರಂಗಾಚಾರ್ಯರ ಕಾರ್ಯಕ್ಷಮತೆಯನ್ನೂ, ಮಹೋದ್ದೇಶಗಳನ್ನೂ ಪ್ರಶಂಸಿಸಿ, ವ್ಯಸನವನ್ನು ಸೂಚಿಸಿದುವು. ಶ್ರೀಮನ್ಮಹಾರಾಜರವರು—"ಗೆಜೆಟ್ಟಿ"ನ ವಿಶೇಷ ಸಂಚಿಕೆಯಲ್ಲಿ (ತಾ॥ ೨೨–೧–೧೮೮೩) "ಅಮೋಘನಾದ ರಾಷ್ಟ್ರಸೇವಕನನ್ನೂ, ವಿಶ್ವಸನೀಯನಾದ ಮಂತ್ರಿಯನ್ನೂ, ಸತ್ಯ ಸಂಕಲ್ಪನಾದ

ಪ್ರಜಾಮಿತ್ರನನ್ನೂ'' ಕಳೆದುಕೊಂಡ ಶೋಕವನ್ನು ಪ್ರಕಟಮಾಡಿ, ಎರಡು ದಿನ ಸಮಸ್ತ ಕೋರ್ಟು ಕಛೇರಿಗಳೂ ಕೆಲಸವನ್ನು ನಿಲ್ಲಿಸಬೇಕೆಂದೂ, ರಂಗಾಚಾರ್ಯರ ಕುಟುಂಬದವರಿಗೆ ಒಂದು ಲಕ್ಷ ರೂಪಾಯಿಸ ಸಹಾಯದ್ರವ್ಯವನ್ನು ಕೊಡತಕ್ಕದೆಂದೂ ಆಜ್ಞಾಪಿಸಿದರು. ಭರತಖಂಡದ ನಾನಾ ಭಾಗಗಳ ಪ್ರಮುಖ ಜನರೂ ದೊಡ್ಡ ಮನುಷ್ಯರೂ ರಂಗಾಚಾರ್ಯರ ಕುವರರಾದ ರಾಘವಾಚಾರ್ಯರಿಗೆ ತಮ್ಮ ಅನುತಾಪವನ್ನು ತಿಳಿಯಪಡಿಸಿದರು. ಬೆಂಗಳೂರಲ್ಲಿ ಆರ್ಕಾಟು ಶ್ರೀನಿವಾಸಾಚಾರ್ಯರು, ಸಾಹುಕಾರ್ ಏಕಾಂಬ್ರ ಸಾಹುಜಿಯವರು, ಪೇಟೆಯ ಶೆಟ್ಟಿವರ್ತಕರು, ಸೇಟುಗಳು ಮುಂತಾದ ದೊಡ್ಡಮನುಷ್ಯರೆಲ್ಲರೂ ಸಭೆಮಾಡಿ, ಗತಿಸಿದ ದಿವಾನರಲ್ಲಿ ತಮಗಿದ್ದ ಗೌರವವನ್ನು ವ್ಯಕ್ತಗೊಳಿಸಿದರು. ಪುನಃ ಫೆಬ್ರುವರಿ ೮ರಲ್ಲಿ ಬೆಂಗಳೂರು ಅಠಾರಾ ಕಛೇರಿಯಲ್ಲಿ ಮಹಾಸಭೆಯೊಂದು ಸೇರಿತು. ಆಗ ಚೀಫ್ ಜಡ್ಜಿ ಪ್ಲಮರ್ ಅವರು ಅಗ್ರಾಸನಾಸೀನರಾಗಿ ತಮಗೆ ರಂಗಾಚಾರ್ಯರಲ್ಲಿದ್ದ ಗೌರವ ವಿಶೇಷವನ್ನು ತಿಳುಹಿಸಿದರು. ಕೌನ್ಸಿಲರ್ ತಂಬು ಶೆಟ್ಟರವರೂ, ಪೂರ್ಣಕೃಷ್ಣರಾಯರೂ, ಬ್ಯಾರಿಸ್ಟರ್ ಮೀನಾಕ್ಷಯ್ಯನವರೂ ಆಗ ದಿವಾನರ ಕಾರ್ಯಸಂವಿಧಾನ ಗುಣಾತಿಶಯಗಳನ್ನು ವಿಸ್ತಾರವಾಗಿ ಬಣ್ಣಿಸಿದರು. ಮೈಸೂರು ಸಂಸ್ಥಾನದ ಪುನರುಜ್ಜೀವನ ಕಾರ್ಯದಲ್ಲಿಯೂ, ಮಹಾರಾಜರವರ ವಿದ್ಯಾಭ್ಯಾಸ ಕಾರ್ಯದಲ್ಲಿಯೂ ಯಾವ ಮಹನೀಯರಿಗೆ ರಂಗಾಚಾರ್ಯರು ಸಮರ್ಥರಾದ ಸಹೋದ್ಯೋಗಿಯಾಗಿದ್ದರೋ, ಆ ಬ್ರಿಟಿಷ್ ರೆಸಿಡೆಂಟರಾದ ಸರ್ ಜೇಮ್ಸ್ ಗಾರ್ಡನ್ ಸಾಹೇಬರೂ ಆ ಸಂದರ್ಭದಲ್ಲಿ ಅಲ್ಲಿದ್ದು— ತಾವು ರಂಗಾಚಾರ್ಯರಲ್ಲಿ ಪಕ್ಷಪಾತಿಗಳೆಂದು ಕೆಲವರು ಆಡಿಕೊಳ್ಳುತಿದ್ದುದು ಅಬದ್ಧವೆಂದೂ, ಇತರ ನಿರ್ಮತ್ಸರರಾದ ದೊಡ್ಡಮನುಷ್ಯರು ಯಾವ ಕಾರಣದಿಂದ ರಂಗಾಚಾರ್ಯರನ್ನು ಗೌರವಿಸಿದ್ದರೋ ಅದೇ ಕಾರಣದಿಂದ ತಾವೂ ಅವರಲ್ಲಿ ವಿಶ್ವಾಸವನ್ನಿಟ್ಟಿದ್ದರೆಂದೂ, ಅವರ ವಿಷಯದಲ್ಲಿ ಕ್ಷುದ್ರಜನರು ಹುಟ್ಟಿಸಿದ್ದ ಸುದ್ದಿಗಳು ನಿರಾಧಾರವಾದುವೆಂದೂ, ರಂಗಾಚಾರ್ಯರು ಬಡತನದಲ್ಲಿ ಸತ್ತುದೇ ಅವರ ನಿಃಸ್ಪ

ಹತೆಗೂ ಸತ್ಯಸಂಧತೆಗೂ ನಿದರ್ಶನವೆಂದೂ ಘಂಟಾಘೋಷವಾಗಿ ಹೇಳಿದರು. ಮೈಸೂರು ಪಟ್ಟಣದಲ್ಲಿಯೂ, ಶಿವಮೊಗ್ಗಾ, ಕೋಲಾರ ಮೊದಲಾದ ಇತರ ಮುಖ್ಯ ಸ್ಥಳಗಳಲ್ಲಿಯೂ ಶೋಕಪ್ರದರ್ಶಕ ಸಭೆಗಳು ಜರುಗಿದವು.

ಚಾಡಿಗಾರರ ಮಾತು ಕೇಳಿ ಒಂದಾನೊಂದು ಕಾಲದಲ್ಲಿ ಅವರಲ್ಲಿ ಅಪ್ರೀತಿಯನ್ನು ತೋರಿಸಿದ್ದ ಬಿ. ಯಲ್. ಬೌರಿಂಗ್ ಸಾಹೇಬರವರು ಈ ರೀತಿ ಬರೆದರು :—

"ಆತನ ಕುಟುಂಬದವರಿಗೆ ವಿಶೇಷ ವ್ಯಸನಕರವಾಗಿರುವುದು ಮಾತ್ರವಲ್ಲದೆ, ಮೈಸೂರು ದೇಶಕ್ಕೇ ಸಾರ್ವಜನಿಕವಾದ ವಿಪತ್ತನ್ನುಂಟುಮಾಡಿರುವ ಈ ಸಂದರ್ಭ ದಲ್ಲಿ ನಾನು ನನ್ನ ಮನಃಪೂರ್ವಕವಾದ ಅನುತಾಪವನ್ನು ಸೂಚಿಸಲು ಆತುರನಾ ಗಿದ್ದೇನೆ. ಆತನು ದೇಶದ ಆದಾಯವನ್ನು ಕುದುರಿಸಿ, ದೇಶೀಯರ ಯೋಗಕ್ಷೇಮ ಗಳನ್ನು ವೃದ್ಧಿಪಡಿಸುವುದಕ್ಕೆಂದು ಮಾಡಿದ ಸತ್ಪ್ರಯತ್ನಗಳನ್ನು ನಾನು ಚೆನ್ನಾಗಿ ಬಲ್ಲೆ. ಆತನ ಅಕಾಲ ಮರಣದಿಂದ ಅವರು ನಿಷ್ಕಪಟಿಯಾದ ಉಪಕಾರಿಯನ್ನೂ, ಬುದ್ಧಿ ಶಾಲಿಯಾದ ರಾಜ್ಯಾಧಿಕಾರಿಯನ್ನೂ ಕಳೆದುಕೊಂಡಿರುವರು. ಆತನ ಸ್ಥಾನಕ್ಕೆ ದೇಶ ದಲ್ಲಿರುವ ಅನೇಕ ಮಂದಿ ಶಕ್ತರಾದ ಅಧಿಕಾರಿಗಳಲ್ಲಿ ಒಬ್ಬನನ್ನು ಚುನಾಯಿಸಬಹು ದಾದರೂ, ರೆಸಿಡೆಂಟರು, ಮಹಾರಾಜರು ಇವರಿಬ್ಬರೂ ಒಪ್ಪಬಹುದಾದವರಾರೂ ಇಲ್ಲವೆಂದು ನನಗೆ ಸಂದೇಹವಾಗಿದೆಯಾಗಿ, ಸಂಸ್ಥಾನದ ಪುರೋಭಿವೃದ್ಧಿಯ ವಿಷಯದಲ್ಲಿ ನಾನು ವಿಶೇಷ ಚಿಂತಾಕ್ರಾಂತನಾಗಿರುವೆನು. ರಾಜ್ಯಕಾರ್ಯ ನಿರ್ವಾಹಕ ಶಕ್ತಿಯೂ, ನಿರ್ವಂಚನೆಯೂ, ಗುಣಜ್ಞತೆಯೂ ಸೇರಿರುವುದು ಅಸಾಧಾರಣ. ಸತ್ಯಸಂಧತೆಯೂ ದೇಶವಾತ್ಸಲ್ಯವೂ ದುರ್ಲಭವೇ ಸರಿ."

ಜಿ. ಯನ್. ಟೇಲರವರು ರಂಗಾಚಾರ್ಯರಿಗೆ ದೀರ್ಘಕಾಲದ ಆಪ್ತಮಿತ್ರರಾಗಿದ್ದರು. ಟೇಲರವರು ವೈಸ್‌ರಾಯರವರ ಶಾಸನ ಸಭೆಯ ಸದಸ್ಯರಾಗಿದ್ದಾಗ ರಂಗಾಚಾರ್ಯರ ಅಭಿಪ್ರಾಯಗಳನ್ನು ತಮ್ಮ ಭಾಷಣಗಳಲ್ಲಿ ಉದಾಹರಿಸುತ್ತಿದ್ದರು. ಇಂತಹವರು, "ರಂಗಾ ಚಾರ್ಯರನ್ನು ಕಳೆದುಕೊಂಡುದಕ್ಕಾಗಿ ಆತನ ದೇಶೀಯರು ಬಹುಕಾಲ ದುಃಖಿಸುವರು" ಎಂದು ಹೇಳಿದುದು ಆಶ್ಚರ್ಯವಲ್ಲ. ಆದರೆ ಅದು ಅತಿಶಯೋಕ್ತಿಯೂ ಅಲ್ಲ.

"ಆತನು ನನ್ನ ಬಹಳ ಹಳೆಯ ಮತ್ತು ಅತ್ಯಂತ ಶ್ರೇಷ್ಠರಾದ ಶಿಷ್ಯರಲ್ಲೊಬ್ಬನು. ಆತನ ಅಕಾಲ ಮರಣವು ಆತನ ಸಂಸಾರಕ್ಕೂ ಸ್ನೇಹಿತರಿಗೂ ಮಾತ್ರವಲ್ಲದೆ ಇಂಡಿಯಾದೇಶಕ್ಕೂ—ಅದರಲ್ಲಿ ವಿಶೇಷವಾಗಿ ಮೈಸೂರು ಸಂಸ್ಥಾನಕ್ಕೆ—ಬಹು ದೊಡ್ಡ ನಷ್ಟವನ್ನುಂಟುಮಾಡಿದೆ. ಹಿಂದುವಾದವನು ರಾಜ್ಯತಂತ್ರಜ್ಞರಲ್ಲಿ ಉತ್ತಮ ತರಗತಿಗೆ ಬಂದರೆ, ಅದರಿಂದ ದೇಶವೆಲ್ಲಕ್ಕೂ ಗೌರವವಲ್ಲದೆ, ಆತನ ದೇಶೀಯರು ಆತನಂತೆಯೇ ಉನ್ನತ ಮಾರ್ಗದಲ್ಲಿ ನಡೆಯಲು ಕಾರಣವಾಗುವುದು.''—

ಎಂದು ರಂಗಾಚಾರ್ಯರ ಆಂಗ್ಲ ವಿದ್ಯಾ ಗುರುಗಳಾದ ಪೊವೆಲ್‌ರವರು ಸೂಚಿಸಿದರು. ಪೊವೆಲ್‌ರವರಲ್ಲಿ ರಂಗಾಚಾರ್ಯರಿಗೆ ತುಂಬಾ ಭಕ್ತಿಯಿತ್ತು. ಅವರ ಕೈಕೆಳಗೆ ತಯಾರಾದವರಲ್ಲಿ ರಾಜಾ ಸರ್ ಟಿ. ಮಾಧವರಾಯರೇ ಮುಂತಾಗಿ ಅನೇಕರು ಸುಪ್ರಸಿದ್ಧರು. ಪೊವೆಲ್‌ರವರು ಕೆಲಸದಿಂದ ನಿವೃತ್ತರಾದಾಗ ಅವರ ಶಿಷ್ಯರೆಲ್ಲರೂ ಸಭೆ ಸೇರಿ ತಮ್ಮ ಕೃತಜ್ಞತೆಯನ್ನು ಸೂಚಿಸಿ, ಅವರ ಹೆಸರಿನಲ್ಲಿ ಒಂದು ಜ್ಞಾಪಕ ಚಿಹ್ನೆಯನ್ನು ನಿರ್ಮಿಸಬೇಕೆಂದು ಗೊತ್ತುಮಾಡಿದರು. ರಂಗಾಚಾರ್ಯರು ಮೈಸೂರಿನಿಂದ ಆ ಸಭೆಗೆ ಹೋಗಿದ್ದು, ಅಲ್ಲಿ ತಮ್ಮ ಉಪಾಧ್ಯಾಯರ ಗುಣಾತಿಶಯಗಳನ್ನು ಶ್ಲಾಘಿಸಿ ಉಪನ್ಯಾಸ ಮಾಡಿ, ಜ್ಞಾಪಕ ಚಿಹ್ನೆಗಾಗಿ ೫೦೦ ರೂಪಾಯಿಗಳ ಚಂದಾ ಹಣವನ್ನು ಕೊಟ್ಟು ಬಂದರು. ಮದರಾಸಿನಲ್ಲಿರುವ ರಾಜಧಾನೀ ಪ್ರೌಢ ಕಲಾಶಾಲೆಯಲ್ಲಿ (ಪ್ರೆಸಿಡೆನ್ಸೀ ಕಾಲೇಜು) ಪೊವೆಲ್‌ರವರ ಶಿಲಾ ಪ್ರತಿಮೆಯನ್ನೀಗಲೂ ನೋಡಬಹುದು.

"ಏನೇನು ಮಾಡಲು ತನಗೆ ಶಕ್ತಿಯುಂಟೆಂಬುದನ್ನು ತೋರಿಸುವಷ್ಟರೊಳಗಾಗಿಯೇ ಆತನು (ರಂಗಾಚಾರ್ಲು) ದೈವಗತಿ ಹೊಂದಿದನು. ಒಳ್ಳೆಯ ಭರವಸೆಯನ್ನು ಕೊಡುತ್ತಿದ್ದ ತನ್ನ ಕೆಲಸವು ಫಲಕ್ಕೆ ಬರುವ ಕಾಲದಲ್ಲಿ ಮೃತ್ಯುವಿಗೆ ತುತ್ತಾಗುವದರಷ್ಟು ಖೇದಕರವಾದ ಸಂಗತಿ ಯಾವುದೂ ಇಲ್ಲ. ಇಂಡಿಯಾದೇಶದಲ್ಲಿ ನನಗೆ ಗೊತ್ತಿದ್ದ ಜನರೆಲ್ಲರ ಪೈಕಿ ಆತನೊಡನೆ ಎಲ್ಲಾ ವಿಷಯಗಳನ್ನೂ ಕುರಿತು ಮಾತನಾಡಲು ನನಗೆ ಕುತೂಹಲವಿದ್ದಷ್ಟು ಮತ್ತಾರೊಡನೆ ಮಾತನಾಡುವುದಕ್ಕೂ ಇರಲಿಲ್ಲ. ಆತನಲ್ಲಿ ವಿವಿಧವಿಷಯ ಜ್ಞಾನವು ತುಂಬಿತ್ತು. ಆತನ ಬುದ್ಧಿಯು ಯಾವಾಗಲೂ ಪ್ರಜಾಹಿತಕರವಾದ ಕಾರ್ಯಗಳಲ್ಲಿಯೇ ಓಡುತ್ತಿತ್ತು. ಆ ಚಟು

**ವಟಿಕೆಯಾದ ಮಿದುಳು ಸುಮ್ಮನಿದ್ದುದೇ ನನಗೆ ಗೊತ್ತಿಲ್ಲ. ಆತನು ಮೃದುಸ್ವಭಾವ ನಾಗಿಯೂ, ಸಾಧುಶೀಲನಾಗಿಯೂ ಇದ್ದನು. ಆತನಲ್ಲಿ ಎಳ್ಳಷ್ಟಾದರೂ ಮನಃ ಕಾಲುಷ್ಯವಿರಲಿಲ್ಲ. ಆತನು ಹೋದುದರಿಂದ ಮೈಸೂರಿನಲ್ಲಿ " ಚಿಕೋ ! " ಎಂದಿರುವು ದೆಂದು ನನಗೆ ತೋಚುತ್ತದೆ. ಆತನು ಕಡೆಯುವರೆಗೂ ಮನೋದಾರ್ಢ್ಯವನ್ನಿಟ್ಟು ಕೊಂಡಿದ್ದ ಸಂಗತಿಯು ಸಂತೋಷಕರವಾಗಿದೆ. "—**

ಹೀಗೆಂದು ಪೋರ್ಟರವರು ಬರೆದರು.

ಅನೇಕ ಗ್ರಂಥ ಪ್ರಣೇತರಾದ ಕರ್ನಲ್ ಜಿ. ಬಿ. ಮ್ಯಾಲೆಸನ್, ಸಿ.ಎಸ್.ಐ., ಅವರು ತಮ್ಮ "ದೇಶೀಯ ಸಂಸ್ಥಾನಗಳ ಚರಿತ್ರೆ"ಯ ಪೀಠಿಕೆಯಲ್ಲಿ ಹೀಗೆ ಬರೆದರು:—

**" ವಿದ್ಯಾ ವೈಶಾಲ್ಯದಿಂದಲೂ, ಲೋಕಾನುಭವದಿಂದಲೂ, ದೂರಾಲೋಚನೆ ಯಿಂದಲೂ, ಯುಕ್ತಿ ಯುಕ್ತವಾದ ಅಭಿಪ್ರಾಯಗಳಿಂದಲೂ, ಉತ್ತಮವಾದ ನಡೆ ವಳಿಕೆಯಿಂದಲೂ ಸಮನ್ವಿತರಾಗಿದ್ದ ನನ್ನ ಮಾನ್ಯ ಸ್ನೇಹಿತರಾದ ರಂಗಾಚಾರ್ಲು ಅವರನ್ನು ಇಲ್ಲಿ ಕೃತಜ್ಞತೆಯಿಂದ ಸ್ಮರಿಸದೆ ಇರಲಾರೆನು. ಗ್ರಂಥ ಲೇಖನ ಕಾರ್ಯ ದಲ್ಲಿರುವವರಿಗೆ ಅವರ ಸಾಹಾಯ್ಯವು ಅಮೂಲ್ಯವಾದುದು. "**

ಮೈಸೂರಿನವರೆಲ್ಲರೂ ಮತ್ಸರವನ್ನು ಬಿಟ್ಟು ಒಟ್ಟಿಗೆ ಸೇರಿ, ತಮ್ಮ ದೇಶದ ಮೊದಲನೆಯ ದಿವಾನರೂ, ಪ್ರಜಾಪಕ್ಷದ ಮಂತ್ರಿಯೂ ಆದ ರಂಗಾಚಾರ್ಯರ ಹೆಸರನ್ನು ಶಾಶ್ವತಪಡಿಸಲು ರಾಜಧಾನಿ ಯಲ್ಲಿ ಶ್ರೀಮನ್ಮಹಾರಾಜ ಶ್ರೀ ಚಾಮರಾಜೇಂದ್ರ ಒಡೆಯರವರಿಂದಲೇ ಶಂಕುಸ್ಥಾಪನೆ ಮಾಡಿಸಿ, ಒಂದು ದಿವ್ಯ ಸಭಾಮಂದಿರವನ್ನು ಕಟ್ಟಿಸಿದರು. ಆ ಮಂದಿರದ ಪ್ರವೇಶೋತ್ಸವ ಸಮಯದಲ್ಲಿಯೂ (೧೮೮೫) ಮಹಾ ಪ್ರಭುಗಳವರೇ ಯಜಮಾನರಾಗಿ ನಿಂತು, ತಮ್ಮ ಮಂತ್ರಿವರ್ಯರ ಭಾವಚಿತ್ರವನ್ನು ಮಂದಿರದೊಳಗೆ ಪ್ರಕಾಶಗೊಳಿಸಿದರು. ಆ ಸಂದರ್ಭ ದಲ್ಲಿ ಮಹಾರಾಜರವರು ಈ ರೀತಿಯಾಗಿ ಅಪ್ಪಣೆಕೊಡಿಸಿದರು :—

**ಇಂದಿಗೆ ಹದಿನೈದು ತಿಂಗಳುಗಳ ಕೆಳಗೆ ಕೆಲಸಕ್ಕೆ ಉಪಕ್ರಮವಾಗಿ ಇಷ್ಟು ಶೀಘ್ರ ದಲ್ಲಿ ಕಟ್ಟಿ ಸಿದ್ಧವಾದ ಇಂತಹ ದಿವ್ಯ ಭವನವು ಈ ಪಟ್ಟಣಕ್ಕೆ ಕೇವಲ ಗೌರವಪ್ರದಾಯಕ ವಾಗಿರುತ್ತದೆ. ಇಷ್ಟು ಬೇಗನೆ ಇದರ ಕೆಲಸವು ಪೂರಯಿಸಿದುದನ್ನು ಪರ್ಯಾಲೋಚಿ**

ಸಿದರೆ, ಇದರ ಕಾರ್ಯನಿರ್ವಾಹಕರಾಗಿ ನೇಮಿಸಲ್ಪಟ್ಟಿದ್ದವರ ಸಾಹಸ ಪ್ರಯತ್ನಗಳು ಕೊಂಡಾಡತಕ್ಕವುಗಳಾಗಿವೆ. ಶ್ರೀಮಾನ್ ರಂಗಾಚಾರ್ಯರವರು ನಮ್ಮ ರಾಜ್ಯಕ್ಕೂ ಪ್ರಜೆಗಳಿಗೂ ಮಾಡಿದ ಸೌಕರ್ಯಗಳ ಜ್ಞಾಪಕಾರ್ಥವಾಗಿಯೂ, ಅವರ ವಿಷಯದಲ್ಲಿ ಸಾಧಾರಣವಾಗಿ ಎಲ್ಲರೂ ಇಟ್ಟಿದ್ದ ಗೌರವ ಕೃತಜ್ಞತಾದಿ ಭಾವಗಳ ದ್ಯೋತನಾರ್ಥವಾಗಿಯೂ, ಅವರ ಮರಣಾನಂತರ ಅವರ ಹೆಸರನ್ನು ಈ ದೇಶದಲ್ಲಿ ಯಾವ ರೀತಿಯಿಂದಲಾದರೂ ಶಾಶ್ವತವಾಗಿರುವಂತೆ ಮಾಡಬೇಕೆಂಬ ತಾತ್ಪರ್ಯ ಪ್ರಯತ್ನಗಳು ತಾವಾಗಿ ಅನೇಕರಿಗೆ ಉಂಟಾಗಿ ಕಟ್ಟಿಸಿದ ಈ ಕಟ್ಟಡವು, ಪ್ರಜಾಪ್ರಯೋಜನಾರ್ಥವಾದ ಕಾರ್ಯಗಳಲ್ಲಿ ನಿರತರಾಗಿದ್ದು ದೇಹವನ್ನು ಬಿಟ್ಟ ಆ ಮಹಾಶಯರ ಸ್ಮರಣೆಯನ್ನು ನಿರಂತರವೂ ಉಂಟುಮಾಡದಿರದು. ಅಲ್ಲದೆ, ಗತಿಸಿದ ಆ ಮಹನೀಯರ ಸ್ವಾಭಾವಿಕ ಗುಣವಾಗಿದ್ದ ಪ್ರಜಾಹಿತೈಕ ಚಿಂತನೆಯು, ಮುಂದೆ ಮಂತ್ರಿಪದವಿಯನ್ನು ಹೊಂದತಕ್ಕವರ ನೆನಪಿಗೆ ಪ್ರತಿದಿನವೂ ಬಂದು, ನಾವೂ ರಂಗಾಚಾರ್ಯರಂತೆ ನಡೆಯಬೇಕೆಂಬುದಾಗಿ ಅವರನ್ನು ಪ್ರೇರಿಸಲಿಕ್ಕೆ ಇದೊಂದು ಸಾಧನ ಸಂಪತ್ತಿಯಾಗಿರಬೇಕೆಂಬುದೇ ನಮ್ಮ ಕೋರಿಕೆಯಾಗಿರುತ್ತದೆ.

ಆದರೆ ರಂಗಾಚಾರ್ಯರ ಹೆಸರಿಗೆ ಬೇರೆ ಜ್ಞಾಪಕಚಿಹ್ನೆಯೇಕೆ ? ಪ್ರಜಾಪ್ರತಿನಿಧಿ ಸಭೆಯೇ ಅವರ ಜ್ಞಾಪಕಚಿಹ್ನೆ. ಅವರು ಮಾಡಿರುವ ಅನೇಕ ಕಾರ್ಯಗಳೇ ಅಷ್ಟೊಂದು ಸ್ಮಾರಕಚಿಹ್ನೆಗಳು. ಮೈಸೂರು ದೇಶದವರು ಎಂದಿಗೂ ತಮ್ಮ ಉಪಕಾರಿಯನ್ನು ಮರೆಯುವಷ್ಟು ಕೃತಘ್ನರಾಗಲಾರರು. ತಮ್ಮ ಆಧುನಿಕ ರಾಜ್ಯತಂತ್ರಜ್ಞರಲ್ಲಿ ರಂಗಾಚಾರ್ಯರವರು ಅಗ್ರಗಣ್ಯರೆಂದು ಭಾರತೀಯ ಜನರೆಲ್ಲರೂ ಎಂದೆಂದಿಗೂ ತಿಳಿದಿರುವರು. ರಂಗಾಚಾರ್ಯರ ಜನಪದ ವಾತ್ಸಲ್ಯವನ್ನೂ, ರಾಷ್ಟ್ರಸೇವಾತತ್ಪರತೆಯನ್ನೂ, ಸಾರ್ವಜನಿಕ ಹಿತಚಿಂತನೆಯನ್ನೂ, ಮನೋವಾಕ್ಕಾಯಗಳ ಅಪ್ರಮತ್ತತೆಯನ್ನೂ, ಸಂತತೋದ್ಯೋಗಿತೆಯನ್ನೂ, ಸಾರ್ವತ್ರಿಕ ಜಾಗರೂಕತೆಯನ್ನೂ, ಸ್ವತಂತ್ರ ವಿಚಾರಬುದ್ಧಿಯನ್ನೂ ಯಾರು ನೆನಪಿನಲ್ಲಿರಿಸಿ, ನಡತೆಯಲ್ಲನುಕರಿಸುವರೋ ಅವರು ದೇಶಾರಾಧನ ವ್ರತಕ್ಕೂ ಪ್ರಜಾಧರ್ಮಾನುಷ್ಠಾನಕ್ಕೂ ಆದರ್ಶಪ್ರಾಯರೆನಿಸಿ, ಜೀವನವನ್ನು ಸಾರ್ಥಕಪಡಿಸಿಕೊಂಡವರಾಗುವರು.

1448—28. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ.

# ಪರಿಶಿಷ್ಟ

## ಕೆಲವು ಉಪಕಥೆಗಳು

---

೧. ರಂಗಾಚಾರ್ಯರ ಜನನವಾದುದು ಸೂರ್ಯೋದಯ ಸಮಯದಲ್ಲಿ. ಈ ಲಕ್ಷಣದಿಂದ ಆ ಮಗು ಕೋಪದ ಸ್ವಭಾವದವ ನಾಗುವನೆಂದು ಅವರ ಮನೆಯ ಮುದುಕಿಯರು ಹೇಳುತ್ತಿದ್ದರಂತೆ. ರಂಗಾಚಾರ್ಯರಿಗೆ ಬೇಗ ಕೋಪಬರುತ್ತಿದ್ದುದೇನೋ ನಿಜ.

೨. ಅವರ ತಂದೆ ರಾಘವಾಚಾರ್ಯರು ಮದ್ರಾಸಿಗೆ ಬಂದ ಬಳಿಕ ಮೊದಲು ಕೆಲವು ದಿನ "ಬ್ಲ್ಯಾಕ್ ಟೌನ್" (ಈಗಿನ ಜಾರ್ಜ್ ಟೌನ್) ಎಂಬ ಪ್ರದೇಶದಲ್ಲಿ (ಚನ್ನಕೇಶವಸ್ವಾಮಿಯ) ದೇವಸ್ಥಾನದ ಮಣೇಗಾರರಾಗಿದ್ದರೆಂದು ತೋರುತ್ತದೆ. ಅವರಿಗೆ ಸರಕಾರದ ಗುಮಾಸ್ತೆ ಉದ್ಯೋಗವಾದುದು ಆಮೇಲೆ.

೩. ಮದ್ರಾಸಿನಲ್ಲಿ ಅವರಿಗೆ ಆಶ್ರಯದಾತರಾಗಿದ್ದ ವೆಂಬಾಕಂ ರಾಘವಾಚಾರ್ಯರನ್ನು ಜನರು "ಪೋಲೀಸ್ ರಾಘವಾಚಾರಿ" ಎಂದೂ ಕರೆಯುತ್ತಿದ್ದರು. ಏಕೆಂದರೆ, ಮ್ಯಾಜಿಸ್ಟ್ರೇಟ್ ಹುದ್ದೆಗೆ ಬರುವುದಕ್ಕೆ ಮುಂಚೆ ಅವರು ಪೋಲೀಸ್ ಹುದ್ದೆಯಲ್ಲಿ ಹೆಸರು ವಾಸಿಗೆ ಬಂದಿದ್ದರು. ಅವರು ಬಹು ಕುಟುಂಬ ರಕ್ಷಕರಾಗಿ ಉದಾರಿ ಯೆನಿಸಿದ್ದರು.

೪. ರಂಗಾಚಾರ್ಯರು ಮಗುವಾಗಿದ್ದಾಗ ತಾಯಿಗಿಂತ ಅವರ ಮನೆಯಲ್ಲಿದ್ದ ಒಬ್ಬ ಬಡಮುದುಕಿಯಲ್ಲಿ ಅವರಿಗೆ ವಿಶ್ವಾಸ ಸಲಿಗೆಗಳು ಹೆಚ್ಚಾಗಿದ್ದುವು. ಚೊಕ್ಕಟವಾಗಿರುವ ಅಭ್ಯಾಸವನ್ನು ಆಕೆ ಅವರಿಗೆ ಕಲಿಸುತ್ತಿದ್ದಳಂತೆ.

೫. ರಂಗಾಚಾರ್ಯರಿಗೆ ಪೂರ್ವಕಾಲದ ಪದ್ಧತಿಯಂತೆ ಚೂಡಾ ಕರ್ಮವಾದ ಕೂಡಲೆ ಅಕ್ಷರಾಭ್ಯಾಸ ಪ್ರಾರಂಭವಾಯಿತು. ಅದು

ಅವರ ಮನೆಯ ಸಮೀಪದಲ್ಲಿದ್ದ ಒಂದು ಜಗಲಿಯ ಮೇಲಿನ ಮಠದಲ್ಲಿ. ಇದು ಈಗಿಗೆ ಸುಮಾರು ೯೦ ವರ್ಷಗಳ ಹಿಂದಿನ ಮಾತು.

**೬.** ಚಿಕ್ಕಂದಿನಲ್ಲಿ ರಂಗಾಚಾರ್ಯರಿಗೆ ಆಟದಲ್ಲಿ ಹೆಚ್ಚು ಆಸಕ್ತಿ. ಅವರ ಚಿಕ್ಕತಂದೆ ಒಬ್ಬರು ಅದಕ್ಕೆ ಒತ್ತಾಸೆಯಾಗಿದ್ದರಂತೆ. ಚತುರಂಗದ ಆಟದಲ್ಲಿಯೂ, ಇಸ್ಪೀಟು ಆಟದಲ್ಲಿಯೂ ರಂಗಾಚಾರ್ಯರು ತಮಗಿಂತ ದೊಡ್ಡವರಾದವರೊಡನೆ ಆಡಲು ಕುಳಿತು, ಕಾಸುಗಳನ್ನು ಗೆದ್ದು ತಿಂಡಿಗಳನ್ನು ಕೊಂಡುಕೊಳ್ಳುತ್ತಿದ್ದರಂತೆ. ದೊಡ್ಡವರಾದ ಮೇಲೂ ಅವರಿಗೆ ಚತುರಂಗದಲ್ಲಿ ಇಷ್ಟವಿತ್ತೆಂದು ಹೇಳಿಕೆಯಿದೆ. ಚತುರಂಗವು ಮಿದುಳಿಗೆ ಕೆಲಸವಿಡತಕ್ಕ ಆಟ.

**೭.** ರಂಗಾಚಾರ್ಯರಿಗೆ ೧೩ನೆಯ ವರ್ಷದಲ್ಲಿ ಪಿತೃವಿಯೋಗವಾಯಿತು. ತಂದೆ ಬಿಟ್ಟ ಆಸ್ತಿ ಸುಮಾರು ೫೦೦ ರೂಪಾಯಿಗಳ ಋಣ ಬಾಧೆ.

**೮.** ಅವರ ಚಿಕ್ಕತಂದೆ ರಾಮಯ್ಯಂಗಾರ್ಯರು ರಂಗಾಚಾರ್ಯರನ್ನೂ, ಅವರ ಅಣ್ಣ ನರಸಿಂಹಾಚಾರ್ಯರನ್ನೂ ಮದ್ರಾಸು ಹೈಸ್ಕೂಲಿನ ಅಧ್ಯಕ್ಷರಾಗಿದ್ದ ಇ. ಬಿ. ಪೊವೆಲ್‌ರವರ ಬಳಿಗೆ ಕರೆದುಕೊಂಡುಹೋಗಿ ಆ ಹುಡುಗರು ತಂದೆಯಿಲ್ಲದವರೆಂದೂ ಕಡುಬಡವರೆಂದೂ ಹೇಳಲಾಗಿ, ಪೊವೆಲ್‌ರವರು ಕನಿಕರಗೊಂಡು ಅವರಿಗೆ ಸ್ವಲ್ಪಕಾಲ ತಮ್ಮ ಸ್ವಂತ ಜೇಬಿನಿಂದಲೇ ಸಹಾಯದ್ರವ್ಯ ಕೊಡುವಂತೆ ಭರವಸೆ ಹೇಳಿ ಅವರನ್ನು ಪ್ರೋತ್ಸಾಹಿಸಿದರಂತೆ.

**೯.** ರಂಗಾಚಾರ್ಯರ ಅಡ್ಡಹೆಸರಿನಲ್ಲಿರುವ "ವೀರವಳ್ಳಿ" ಎಂಬ ಮಾತು ಮಚ್ಚಲೀಪಟ್ಟಣದ ಬಳಿ ಇರುವ ಒಂದು ಹಳ್ಳಿಯ ಹೆಸರಂತೆ. ರಂಗಾಚಾರ್ಯರ ವಂಶದ ಪೂರ್ವಿಕರು ಆ ಪ್ರಾಂತ ವಾಸವಾಗಿದ್ದವರು. ಹೀಗೆ ತೆಲುಗು ಸೀಮೆಯಲ್ಲಿ ಅವರಿದ್ದುದೇ ರಂಗಾಚಾರ್ಯರ ಹೆಸರಿನ "ರಂಗಾಚಾರ್ಲು" ಎಂಬ ತೆಲುಗು ರೂಪಕ್ಕೆ ಕಾರಣವಾಗಿರಬಹುದು.

**೧೦.** ರಂಗಾಚಾರ್ಯರ ತಾತ ನರಸಿಂಹಾಚಾರ್ಯರು ಶಿಟ್ಟಿಪುಣ್ಯದಲ್ಲಿ ವೈದಿಕ ಬ್ರಾಹ್ಮಣರಾಗಿದ್ದರು. ತಟಾಕ ಸ್ನಾನ, ನಿತ್ಯಕರ್ಮಾನು

ಷ್ಠಾನ, ರಾಮಾಯಣ ಪಾರಾಯಣ, ಸ್ವಂತ ಭೂಮಿಯಿಂದ ಬೆಳೆದು ಬಂದ ಧಾನ್ಯ ಶಾಕಾದಿಗಳಿಂದ ಜೀವನ—ಇಷ್ಟರಿಂದ ಅವರು ಸಂತುಷ್ಟ ರಾಗಿದ್ದರು. ಅವರ ಸಹಧರ್ಮಿಣಿಯು ಹೆಸರು ಶೇಷಮ್ಮಸವರೆಂದು. ಅವರಿಗೆ ಇಬ್ಬರು ಹೆಣ್ಣುಮಕ್ಕಳೂ ನಾಲ್ವರು ಗಂಡುಮಕ್ಕಳೂ ಇದ್ದರು. ರಂಗಾಚಾರ್ಯರ ತಂದೆ ರಾಘವಾಚಾರ್ಯರು ಗಂಡುಮಕ್ಕ ಳಲ್ಲಿ ದೊಡ್ಡವರು.

೧೧. ರಂಗಾಚಾರ್ಯರು ಆಚಾರನಿಷ್ಠೆಯ ಆಡಂಬರವುಳ್ಳವರೂ ಆಗಿರಲಿಲ್ಲ; ಅನಾಚಾರಿಯೂ ಆಗಿರಲಿಲ್ಲ. ಪಾರಾಯಣವ್ರತ ಮುಂತಾದ ವಿಶೇಷಾನುಷ್ಠಾನಗಳೇನನ್ನೂ ಇಟ್ಟುಕೊಂಡಿರಲಿಲ್ಲ; ಸಂಧ್ಯಾವಂದನೆ ಶ್ರಾದ್ಧಗಳನ್ನು ಬಿಟ್ಟಿರಲಿಲ್ಲ. ಆಗಾಗ ದೇವಾಲಯಗಳಿಗೆ ಹೋಗು ತ್ತಿದ್ದರು. ಅವರಿಗೆ ಜ್ಯೋತಿಷ, ಶಕುನ, ಮಂತ್ರವಾದಗಳಲ್ಲಿ ವಿಶ್ವಾಸ ಹೆಚ್ಚಾಗಿರಲಿಲ್ಲವಂತೆ.

೧೨. ರಂಗಾಚಾರ್ಯರು ಊಟ ಉಪಚಾರಗಳಲ್ಲಿ ವಿಶೇಷ ವಸ್ತು ಗಳನ್ನು ಬಯಸುತ್ತಿದ್ದವರಲ್ಲ. ಅವರಿಗೆ ಹಣ್ಣುಗಳು ಪ್ರಿಯವಾ ಗಿದ್ದುವು. ಭಕ್ಷ್ಯ ಭೋಜ್ಯಗಳಲ್ಲಿ ಸಿಹಿಗಿಂತ ಹುಳಿ ಖಾರಗಳು ಇಷ್ಟವಾ ಗಿದ್ದುವಂತೆ. ಕೋಪದ ಸ್ವಭಾವದವರಿಗೆ ಖಾರವೇ ಪ್ರಿಯವೆಂದು ಹೇಳುವುದುಂಟಲ್ಲವೆ?

೧೩. ರಂಗಾಚಾರ್ಯರು ತಮ್ಮ ಮಕ್ಕಳಿಗೆ ಸಂಗೀತ ಹೇಳಿಸು ತ್ತಿದ್ದುದಲ್ಲದೆ, ತಮ್ಮ ಸಂತೋಷಕ್ಕಾಗಿ ಆಗಾಗ ಬಂದು ಹಾಡುವುದ ಕ್ಕೊಕ್ಕರ ಸಂಗೀತಗಾರರನ್ನು ಇಟ್ಟುಕೊಂಡಿದ್ದರು. ಅವರ ತಮ್ಮಂದಿ ರಾದ ಶ್ರೀನಿವಾಸಯ್ಯಂಗಾರ್ಯರಿಗೆ ಸಂಗೀತ ಚಿತ್ರಕಲೆಗಳೆರಡರಲ್ಲಿಯೂ ಪರಿಶ್ರಮವಿತ್ತು.

೧೪. ರಂಗಾಚಾರ್ಯರು ಕುದುರೆಯ ಸವಾರಿಯನ್ನು ತಕ್ಕ ಮಟ್ಟಿಗೆ ಕಲಿತಿದ್ದರು. ಆದರೂ ಕಾಲುನಡಿಗೆಯಲ್ಲಿ ಅವರಿಗೆ ಹೆಚ್ಚು ಇಷ್ಟ. ಕೈಯಲ್ಲಿ ಕಟ್ಟಿಗೆಯೊಂದನ್ನು ಹಿಡಿದು ಬೇಗ ಬೇಗನೆ ದೂರ ನಡೆಯುತ್ತಿದ್ದರು. ಕೊಡೆ ಹಿಡಿಯುವ ಅಭ್ಯಾಸವನ್ನಿಟ್ಟಿರಲಿಲ್ಲ. ಅವರ

ಮಕ್ಕಳಾದ ರಾಘವಾಚಾರ್ಯರೂ ಕೂಡ ಎಂಥ ಬಿಸಿಲಿನಲ್ಲಾದರೂ ಕೊಡೆಯನ್ನು ಹಿಡಿದುಕೊಳ್ಳದೆ ತಿರುಗುತ್ತಿದ್ದರಂತೆ.

**೧೫.** ನಿತ್ಯಗಟ್ಟಲೆಯ ನಡೆವಳಿಕೆಯಲ್ಲಿ ರಂಗಾಚಾರ್ಯರು ಯಾವ ಒಂದು ಕಾಲ ಕ್ರಮವನ್ನೂ ನಿಯಮವಾಗಿಟ್ಟುಕೊಂಡಿರಲಿಲ್ಲ. ಕಾರ್ಯಾವಸರಕ್ಕೆ ತಕ್ಕಂತೆ ನಡೆದುಕೊಳ್ಳುತ್ತಿದ್ದರು. ಸಾಮಾನ್ಯವಾಗಿ ಬೆಳಗಾಗ ೫ ಘಂಟೆಗೆ ಏಳುವರು; ೧೦ ಘಂಟೆಯವರೆಗೂ ಬಂದ ಜನರನ್ನು ನೋಡಿ ಮಾತನಾಡುವರು; ಆಮೇಲೆ ಕಛೇರಿಗೆ ಹೋಗುವರು.

**೧೬.** ಅವರ ಕಾರ್ಯರೀತಿಯನ್ನು ಕುರಿತು ೧೮೮೪ನೆಯ ಇಸ್ವಿ ಜನವರಿ ೩ನೆಯ ತಾರೀಖಿನ "ವೃತ್ತಾಂತ ಚಿಂತಾಮಣಿ"ಯು ಹೀಗೆ ಬರೆಯಿತು:—

"ದಿವಾನ್ ರಂಗಾಚಾರ್ಯರು ಈ ರಾಜ್ಯಭಾರದ ಗೌರವವನ್ನು ತಿಳಿದುಕೊಂಡು, ಸರ್ವ ಸಾಹಸದಿಂದಲೂ ಹಿಂದುಗಳು ಇಂಗ್ಲಿಷರಿಗಿಂತಲೂ ಚೆನ್ನಾಗಿ ರಾಜ್ಯಭಾರ ಮಾಡಬಲ್ಲರೆಂಬದಾಗಿ ಇಂಡಿಯಾ ಗವರ್ನ್ಮೆಂಟಿಗೂ ಲೋಕಕ್ಕೂ ವ್ಯಕ್ತಗೊಳಿಸುವ ಅಭಿಲಾಷೆಯಿಂದ, ಯೋಗ್ಯರಾಗಿಯೂ ಸಮರ್ಥರಾಗಿಯೂ ಇರುವ ಜನಗಳನ್ನು ಸಮೀಪದಲ್ಲಿಟ್ಟುಕೊಂಡು, ಹಗಲೆಲ್ಲಾ ರೈತರ ಮತ್ತು ಪ್ರಜೆಗಳ ಅಹವಾಲುಗಳನ್ನು ಕೇಳುತ್ತ, ಎಲ್ಲರಿಗೂ ಸುಲಭರಾಗಿದ್ದುಕೊಂಡು, ಎಲ್ಲರಿಂದಲೂ ದೇಶದ ಆಡಳಿತಗಳ ವಾಸ್ತವ್ಯವನ್ನು ತಿಳಿದುಕೊಳ್ಳುತ್ತಾ, ಪ್ರಜೆಗಳಿಗೆ ಕ್ಷೇಮವೂ ಸರಕಾರಕ್ಕೆ ಲಾಭವೂ ಆಗುವಂತೆ ಅಹೋರಾತ್ರಿಯಲ್ಲಿಯೂ ಸರಕಾರದ ಕೆಲಸಗಳನ್ನೆಲ್ಲಾ ತಮ್ಮ ಸ್ವಂತ ಕಾರ್ಯಕ್ಕಿಂತಲೂ ಅತಿಶಯವಾಗಿ ನೋಡುತ್ತಿದ್ದರು. ಸಾಮಾನ್ಯವಾಗಿ ಪ್ರತಿನಿತ್ಯವೂ ರಾತ್ರಿ ೧೨ ಘಂಟೆಯವರೆಗೂ ಅನೇಕ ಲೇಖಕರನ್ನು ಇಟ್ಟುಕೊಂಡು ಅವರಿಂದ ಸರಕಾರದ ಕಾಗದಪತ್ರಗಳನ್ನು ಬರೆಸುತ್ತಿದ್ದರು. ಒಂದೊಂದು ದಿನ ಇವರು ರಾತ್ರಿ ಎರಡು ಘಂಟೆಯವರೆಗೂ ಕೆಲಸ ಮಾಡುತ್ತಿದ್ದರು................ರಂಗಾಚಾರ್ಯರು ಈ (ರೈತರ ಅಹವಾಲುಗಳನ್ನು ಕೇಳುವ) ಅಗಾಧವಾದ ಕೆಲಸಕ್ಕೆ ಕಾಲವನ್ನು ಕ್ಲುಪ್ತಮಾಡಿಕೊಂಡಿರಲಿಲ್ಲ. ರೈತರಿಗೆ ಅನುಕೂಲವಾದ ಕಾಲವೇ ಇವರಿಗೆ ಕ್ಲುಪ್ತಕಾಲವಾಗಿತ್ತು. ಕೇಳುತ್ತಿದ್ದ ಫಿರ್ಯಾದಿನ ವಿಷಯವು ಮಧ್ಯರಾತ್ರಿಯವರೆಗೆ ಹಿಡಿದರೂ ವಿಷಯವು ಸಮಗ್ರವಾಗಿ ತಿಳಿದ ಹೊರತು ಏಳುತ್ತಿರಲಿಲ್ಲ."

ಈ ವಾಕ್ಯಗಳು, ರಂಗಾಚಾರ್ಯರು ಸತ್ತು ಐದು ವರ್ಷಗಳಾದ ಮೇಲೆ, ಅವರ ದಾರಿಯನ್ನು ಶೇಷಾದ್ರಿಯ್ಯರವರು ಅನುಸರಿಸುತ್ತಿಲ್ಲ ವೆಂದು ಆಕ್ಷೇಪಣೆ ಮಾಡಿ ಬರೆದ ಒಂದು ಲೇಖನಕ್ಕೆ ಸೇರಿದುವು. ಇಂಥ ಲೇಖನಗಳು ಆ ಕಾಲದುವು ಅನೇಕ ಇವೆ.

**೧೭.** ಹಿಂದೂಪುರದ ಕಡೆಗೆ ರೈಲು ಹಾಕಿಸುವ ಯೋಚನೆ ನಡೆಯುತ್ತಿದ್ದ ಕಾಲದಲ್ಲಿ, ರಂಗಾಚಾರ್ಯರು ಅತ್ತ ಕಡೆಯಿಂದ ಬೆಂಗ ಳೂರಿಗೆ ದವಸ ಧಾನ್ಯಗಳನ್ನು ತರುತ್ತಿದ್ದ ಬಂಡಿಗಳವರನ್ನು ಕಂಡು ವಿಚಾರಿಸಿ, ಅವರಿಂದ ಆ ಪ್ರಾಂತದ ಜನರ ಸ್ಥಿತಿ ಗತಿಗಳು, ಜಲಾನುಕೂಲ ಗಳು, ವ್ಯವಸಾಯ ಸ್ಥಿತಿ, ವ್ಯಾಪಾರ ಮುಂತಾದ ವಿಷಯಗಳನ್ನು ತಿಳಿದುಕೊಳ್ಳುತ್ತಿದ್ದರಂತೆ.

**೧೮.** ರಂಗಾಚಾರ್ಯರು ದಿವಾನರಾಗಿದ್ದ ಕಾಲದಲ್ಲಿ ಚಿಂತಾ ಮಣಿಯಲ್ಲೋ ಅಥವಾ ಮತ್ತಾವ ಊರಿನಲ್ಲೋ ಇದ್ದ ಮುನ್‌ಸಿಫರ ಕೋರ್ಟಿನಲ್ಲಿ ವ್ಯವಹಾರಗಳ ಸಂಖ್ಯೆಯು ತೀರಾ ಇಳಿದುಹೋಯಿ ತಂತೆ. ಅಷ್ಟು ಒಳ್ಳೆಯ ವ್ಯಾಪಾರದ ಸ್ಥಳದಲ್ಲಿ ವಿವಾದಗಳು ಇದ್ದಕ್ಕಿದ್ದ ಹಾಗೆಯೇ ಹೀಗೆ ಕಡಿಮೆಯಾದುದು ದಿವಾನರ ಗಮನಕ್ಕೆ ಬಂತು. ಅವರು ಅದರಲ್ಲೇನೋ ವಿಶೇಷವಿರಬೇಕೆಂದು ಊಹಿಸಿ, ಆ ಸ್ಥಳದಲ್ಲಿ ವಿಚಾರ ನಡಿಸಿ ಬರಲು ಒಬ್ಬ ದೊಡ್ಡ ಹುದ್ದೇದಾರನನ್ನು ಆ ಊರಿಗೆ ಕಳುಹಿಸಿದರಂತೆ. ಆತನು ಅಲ್ಲಿಗೆ ಹೋಗಿ, ಅಲ್ಲಿಯ ವರ್ತಕರನ್ನು ಬರಮಾಡಿಕೊಂಡು ಸಂದರ್ಭವೇನೆಂದು ಅವರಲ್ಲಿ ಪ್ರತಿಯೊಬ್ಬರನ್ನೂ ಬೇರೆ ಬೇರೆಯಾಗಿ ಕೇಳಿದನಂತೆ. ಪ್ರತಿಯೊಬ್ಬ ವರ್ತಕನೂ— "ಕೋರ್ಟಿಗೆ ಹೋದರೆ ಖರ್ಚುಗಳು ಹೆಚ್ಚು, ಸ್ವಾಮಿ; ಅದ ಕ್ಕೋಸ್ಕರ ನಾವು ನಾವೇ ವ್ಯಾಜ್ಯಗಳನ್ನು ತೀರ್ಮಾನಮಾಡಿಕೊಳ್ಳ ಬೇಕಾಗಿದೆ" ಎಂದು ಹೇಳಿದನಂತೆ. ಈ ಉತ್ತರದ ಗೂಢಾರ್ಥ ವೇನೆಂದು ಯಾರನ್ನು ಕೇಳಿದರೂ ಅವರಲ್ಲಿ ಯಾರೂ ವಿವರವನ್ನು ಬಿಟ್ಟುಕೊಡಲಿಲ್ಲ. ಆಮೇಲೆ ಆ ಹುದ್ದೇದಾರನು ದಿವಾನರ ಬಳಿಗೆ ಹೋಗಿ ತಾನು ವರ್ತಕರ ಮುಖದಿಂದ ಕೇಳಿದ್ದ ಉತ್ತರವನ್ನು ಅರಿಕೆ ಮಾಡಿದನಂತೆ. ಕೂಡಲೆ ದಿವಾನರು—"ಓಹೋ, ಅಲ್ಲಿಯ ಮುನ್‌ಸಿಫನು

ಲಂಚಕ್ಕೆ ಕೈಯೊಡ್ಡುತ್ತಿದ್ದಾನೆಂದು ತೋರುತ್ತದೆ. ಅವನಿಗೆ ಲಂಚ ತೆತ್ತು ನ್ಯಾಯವನ್ನು ಕೊಂಡುಕೊಳ್ಳಬೇಕಾದರೆ ಖರ್ಚುಗಳು ಹೆಚ್ಚು ವುದು ಸ್ವಾಭಾವಿಕವಾಗಿಯೇ ಇದೆ. ವರ್ತಕರು ಯುಕ್ತಿವಂತರು ಮತ್ತು ಭಯಸ್ತರು. ಆದುದರಿಂದ ಒಗ್ಗಟ್ಟಾಗಿ, ನಿಮಗೆ ಗೂಢವಾಗಿ ಜವಾಬು ಹೇಳಿದ್ದಾರೆ'' ಎಂದು ವ್ಯಾಖ್ಯಾನ ಮಾಡಿದರಂತೆ. ಹೀಗೆ ಹೇಳಿ, ಒಡನೆಯೇ ಆ ಮುನ್‌ಸಿಫನನ್ನು ಆ ಕೆಲಸದಿಂದ ತೆಗೆದು ಹಾಕಿದರಂತೆ. ಈ ಬಗೆಯ ತೀವ್ರ ಶಿಕ್ಷೆಯು ಆ ಕಾಲದಲ್ಲಿ ಅತ್ಯಾವಶ್ಯಕವಾಗಿತ್ತು. ಅದು ಆಗ ಸಾಧ್ಯವೂ ಆಗಿತ್ತು. ಸಂದರ್ಭಗಳು ಈಗ ಬದಲಾಯಿಸಿವೆ.

**೧೯.** ರಂಗಾಚಾರ್ಯರು ಒಬ್ಬಾನೊಬ್ಬ ಅಮಲ್ದಾರನನ್ನು ಕೆಲಸದಿಂದ ಕಿತ್ತುಹಾಕಿದ್ದರಂತೆ. ಆತನು ತನ್ನ ಕೆಲಸವನ್ನು ಸಂಪಾದಿಸಿಕೊಳ್ಳಬೇಕೆಂದು ಅರ್ಜಿಗಳನ್ನು ಬರೆದುಕೊಂಡು, ಇನ್ನೆಷ್ಟೋ ವಿಧಗಳಲ್ಲಿ ದಿವಾನರನ್ನು ಕಾಣಲು ಪ್ರಯತ್ನಿಸಿದನಂತೆ. ಏನು ಮಾಡಿದರೂ ದಿವಾನರ ಮನಸ್ಸು ಕರಗಲಿಲ್ಲ; ಅವರ ಭೇಟಿ ದೊರೆಯಲಿಲ್ಲ. ಹೀಗೆ ಬಹುಕಾಲ ಕಾದು, ಕಡೆಗೆ ಒಂದು ದಿನ ಆತನು ಒಂದು ಉಪಾಯವನ್ನು ಹಿಡಿದನಂತೆ. ರಂಗಾಚಾರ್ಯರು ಪರಸ್ಥಳಗಳಲ್ಲಿ ಸುತ್ತುತ್ತಿದ್ದಾಗ ಬೆಳಿಗ್ಗೆ ತಂಬಿಗೆ ತೆಗೆದುಕೊಂಡು ಊರಿಗೆ ದೂರವಾಗಿ ಬಹಿರ್ಭೂಮಿಗೆ ಹೋಗುವ ಪದ್ಧತಿಯಿತ್ತಂತೆ. ಹಾಗೆ ಅವರು ಒಂದು ಊರಿನಲ್ಲಿ ಹೊರಕ್ಕೆ ಹೋದ ಹೊತ್ತನ್ನು ಈ ಮನುಷ್ಯನು ಹೊಂಚಿ ನೋಡಿಕೊಂಡಿದ್ದು, ಅವರು ತಂಬಿಗೆಯನ್ನಿಟ್ಟು ಸ್ವಲ್ಪ ದೂರದಲ್ಲಿ ಮರೆಯಾಗಿದ್ದಾಗ ಮೆಲ್ಲಗೆ ನಡೆದು, ಆ ತಂಬಿಗೆಯ ನೀರನ್ನು ಉರುಳಿಸಿಬಿಟ್ಟನಂತೆ. ಒಂದು ಕ್ಷಣವಾದ ಬಳಿಕ ದಿವಾನರು ಬಂದು ನೋಡುತ್ತಾರೆ; ತಂಬಿಗೆ ಬೋರಲು ಬಿದ್ದಿದೆ. ಆಗ ಏನು ಮಾಡುವುದಕ್ಕೂ ತೋರದೆ ಅದರ ಕಾರಣವೇನಿರಬಹುದೆಂದು ಅವರು ಅತ್ತಿತ್ತ ನೋಡುತ್ತಿರಲು, ಅಷ್ಟರೊಳಗಾಗಿ ಈ ಗತಿಗೆಟ್ಟ ಅಮಲ್ದಾರನು ಬೇರೊಂದು ತಂಬಿಗೆಯ ತುಂಬಾ ನೀರನ್ನು ತುಂಬಿಕೊಂಡು, ಎರಡು ಕೈಗಳನ್ನೂ ಚಾಚಿ ಅದನ್ನು ಮುಂದಕ್ಕೆ ಹಿಡಿದುಕೊಂಡು, ದಿವಾನರ ಬಳಿಗೆ ಬಂದು

ಕಾಣಿಸಿಕೊಂಡನಂತೆ. ಅವನ ಮುಖವನ್ನು ನೋಡಿದಕೂಡಲೆ ದಿವಾನರು ಸಮಾಧಾನಪಡುವುದಕ್ಕೆ ಬದಲಾಗಿ ಕೋಪಾವಿಷ್ಟರಾಗಿ—"ವೆಧವ" ಎಂಬ ತೆಲುಗು ಮಾತಿನಿಂದ ಅವನನ್ನು ಬೈದರಂತೆ. ಅವನು ಆ ಸಮಯ ದಲ್ಲಿ ಎದೆಗುಂದದೆ—"ಮಹಾಸ್ವಾಮಿ, ಈಗ ತಮ್ಮ ಅನುಗ್ರಹ ವಾಯಿತು! ಇನ್ನು ನನಗೆ ಭಯವಿಲ್ಲ" ಎಂದನಂತೆ. ದಿವಾನರು ಮತ್ತಷ್ಟು ರೇಗಿ "ಹಾಗೆಂದರೇನೋ?............" ಎಂದು ಗದರಿಸಿದರಂತೆ. ಅವನು—"ಸ್ವಾಮಿ, ಈಗತಾನೆ ಆಶೀರ್ವಾದ ಮಾಡಿರುವಿರಿ. ವೆ=ಎಂದರೆ (ವೆಯ್ಯೇಂಡ್ಲು) ಸಾವಿರ ವರ್ಷ, ಧ = ಎಂದರೆ (ಧನ್ಯುಡುಗಾ) ಧನ್ಯನಾಗಿ, ವ=ಎಂದರೆ (ವರ್ಧಿಲ್ಲುಮು) ವರ್ಧಿಸು—ಎಂದು. ಹೀಗೆ ತಾವೇ ಅಪ್ಪಣೆಕೊಡಿಸಿದ ಶುಭ ವಚನವನ್ನು ತಾವು ನಡಿಸಿಕೊಡದೆ ಹೋಗುವಿರಾ? ತಾವು ಸತ್ಯವಾಕ್ಯರು" ಎಂದು ಹೇಳಿಕೊಂಡನಂತೆ. ದಿವಾನರು— "ಇರಲಿ; ನೀನು ಉಪಾಯಶಾಲಿಯೇನೋ ಹೌದು; ಅದನ್ನು ನಾನು ಬಲ್ಲೆ. ಆದರೆ ನಿನ್ನ ನಡತೆಯನ್ನು ತಿದ್ದಿಕೊಳ್ಳುವೆಯಾ? ನಿನಗೆ ಬುದ್ಧಿ ಬಂದಿದೆಯೆ?" ಎಂದು ಕೇಳಿದರು. ಆಗ ಅವನು ತನ್ನ ಹಿಂದಿನ ತಪ್ಪಿತಗಳನ್ನೊಪ್ಪಿಕೊಂಡು ಪಶ್ಚಾತ್ತಾಪವನ್ನು ಚೆನ್ನಾಗಿ ವ್ಯಕ್ತಪಡಿಸಿದ ಮೇಲೆ, ದಿವಾನರು "ಇವನಿಗೆ ಇದುವರೆಗೂ ಆಗಿರುವ ಶಿಕ್ಷೆಯೇ ಸಾಕು" ಎಂದು ಹೇಳಿ, ಅವನಿಗೆ ಪುನಃ ಕೆಲಸವನ್ನು ಕೊಟ್ಟರಂತೆ.

**೨೦.** ರಂಗಾಚಾರ್ಯರಿಗೆ ಜಡಸ್ವಭಾವದವರ ವಿಷಯದಲ್ಲಿ ತಾಳ್ಮೆ ಕಡಿಮೆಯಾಗಿತ್ತು. ವಿಶ್ರಾಂತಿ ಬಯಸುವವರನ್ನೂ, ಕೆಲಸದಲ್ಲಿ ಆಲಸ್ಯ ತೋರುತ್ತಿದ್ದವರನ್ನೂ, ಬುದ್ಧಿಯನ್ನು ಬೇಗ ಬೇಗನೆ ಓಡಿಸ ದವರನ್ನೂ, ಮಂಕಾಗಿಯೂ ಮಂದವಾಗಿಯೂ ಇದ್ದವರನ್ನೂ ಅವರು ಕೋಪದಿಂದ ಗದರಿಸಿ, ಬಹಿರಂಗವಾಗಿ ಹಿಯ್ಯಾಳಿಸುತ್ತಿದ್ದರು. ಅವರ ಸಹೋದ್ಯೋಗಿಗಳಾಗಿದ್ದ ದೊಡ್ಡಮನುಷ್ಯರಿಗೂ ಈ ಅಸಹನೆಯ ವೇಗವು ತಟ್ಟಿತ್ತು. ಇದರಿಂದ ರಂಗಾಚಾರ್ಯರಿಗೆ "ಗರ್ವಿಷ್ಠ", "ದುರಹಂಕಾರಿ" ಎಂಬ ಅಪವಾದಗಳು ಕೆಲವು ಕಡೆ ಬಂದಿದ್ದುವು.

**೨೧.** ರಂಗಾಚಾರ್ಯರು ಕೈಕೆಳಗಿನವರ ವಿಷಯದಲ್ಲಿ ಕ್ರೂರ ರಾಗಿ ತೋರುತ್ತಿದ್ದುದಕ್ಕೆ ಕಾರಣವು ಅವರು ನಿಷ್ಕರುಣಿಯಾಗಿದ್ದ

ರೆಂಬುದಲ್ಲ. ಯಾವ ಕೆಲಸವು ಯಾವ ಬಗೆಯಲ್ಲಿ ಯಾವ ಹೊತ್ತಿಗೆ ಆಗಬೇಕೋ ಅದು ಹಾಗೆಯೇ ಆಗಬೇಕೆಂಬ ಅವರ ಹಟವು ಅವರನ್ನು ಹಾಗೆ ಆಡಿಸುತ್ತಿತ್ತು. "ಇಂಗ್ಲಿಷ್ ಜನರು ಹೇಗಾದರೂ ನಡೆದು ಕೊಳ್ಳಲಿ; ಇಂಡಿಯಾದೇಶದ ಜನರು ಕ್ರಮತಪ್ಪಿ ನಡೆದರೆ, ಅಥವಾ ತಾವು ಅಸಮರ್ಥರೆಂದು ತೋರಿಸಿಕೊಂಡರೆ, ಅಥವಾ ಉದಾಸೀನ ರೆಂದು ತೋರಿಸಿಕೊಂಡರೆ, ಅದರಿಂದ—'ಇವರು ಅಯೋಗ್ಯರು, ಸ್ವತಂತ್ರಾರ್ಹರಲ್ಲ'—ಎಂದು ಇಂಗ್ಲಿಷ್ ಜನರು ಹೇಳಿಬಿಡಬಹುದು. ಅಂಥಾ ಆಕ್ಷೇಪಣೆಗೆ ನಾವು ಅವಕಾಶ ಕೊಡಬಾರದು" ಎಂಬುದಾಗಿ ರಂಗಾಚಾರ್ಯರು ಹೇಳುತ್ತಿದ್ದರು.

**೨೨.** ದೇಶೀಯರು ಐರೋಪ್ಯರಿಗಿಂತ ಕೀಳಲ್ಲವೆಂಬುದನ್ನು ಸಾಧಿಸುವುದು ರಂಗಾಚಾರ್ಯರ ಪರಮ ಪ್ರಯತ್ನ. ಒಂದು ಸಲ ಬೆಂಗಳೂರಿನ ಕಬ್ಬನ್ ಪಾರ್ಕ್ ಎಂಬ ಉಪವನದ ಬಳಿ ಒಂದು ದೊಡ್ಡ ವಿನೋದದಪರಿಷೆ ಏರ್ಪಾಟಾಗಿತ್ತು. ಅಲ್ಲಿ ದೇಶೀಯರೂ ಪರಂಗಿಯವರೂ ಗಂಡಸರೂ ಹೆಂಗಸರೂ ತಂಡತಂಡವಾಗಿ ಸೇರಿದ್ದರು. ಆಗ ಕೆಲವುಂದಿ ಪರಂಗಿ ಶಿಪಾಯಿ(ಸೋಲ್ಜರ್)ಗಳು ಸ್ವೇಚ್ಛೆಯಾಗಿ ತಿರುಗುತ್ತಾ ಹುಲ್ಲುಗಾವಲುಗಳ ಮೇಲೆ ತುಳಿದಾಡುತ್ತಿದ್ದರಂತೆ. ಆ ಕಾಲದಲ್ಲಿ—ಎಂದರೆ ಈಗಿಗೆ ೫೦ ವರ್ಷಗಳ ಕೆಳಗೆ—ಈ ದೇಶದಲ್ಲಿ ಬಿಳಿಯ ಜನ ರೆಂದರೆ ಎಲ್ಲರಿಗೂ ಹೆದರಿಕೆ. ಅದರಲ್ಲಿಯೂ ಸೋಲ್ಜರುಗಳೆಂದರೆ ಅವರಿಗೆ ಎದುರೇ ಇರಲಿಲ್ಲ. ಆಗ, ಮೇಲಿನ ಸಂದರ್ಭವನ್ನು ಅಲ್ಲಿಗೆ ಬಂದ ರಂಗಾಚಾರ್ಯರು ನೋಡಿದರು. ನೋಡುತ್ತಲೇ ಕೋಪೋ ದ್ದೀಪಿತರಾಗಿ, ಆ ಸೋಲ್ಜರುಗಳ ಅಧಿಕಾರಿಯಾದ ಸರದಾರನನ್ನು ಕಂಡು, "ದೇಶೀಯರಿಗಿಲ್ಲದ ಸ್ವಾತಂತ್ರ್ಯ ಈ ಜನರಿಗೆಲ್ಲಿಯದು? ಇತರರು ಅನುಸರಿಸುವ ನಿಯಮವನ್ನು ಸೋಲ್ಜರುಗಳು ಹೇಗೆ ಉಲ್ಲಂಘಿಸಬಹುದು?"—ಎಂದು ವಾದ ನಡೆಸಿ, ಆ ಸೋಲ್ಜರುಗಳು ದಾರಿ ತಪ್ಪದಂತೆ ಬಂದೋಬಸ್ತು ಮಾಡಿಸಿದರಂತೆ.

**೨೩.** ರಂಗಾಚಾರ್ಯರ ಬರೆಹ ಚೆನ್ನಾಗಿರಲಿಲ್ಲ. ಅವರು ಬೇರೊಬ್ಬರನ್ನು ಕೂಡಿಸಿಕೊಂಡು ಹೇಳಿ, ಅವರ ಕೈಯಿಂದ ಬರೆ

ಯಿಸುತ್ತಿದ್ದರು. ಅವರ ದಿನದಿಂದೀಚೆಗೆ ಡೆಪ್ಯುಟಿ ಕಮಿಷನರಾಗಿದ್ದ ನಾರಾಯಣರಾಯರವರೂ, ಅಸಿಸ್ಟೆಂಟು ಕಮಿಷನರಾಗಿದ್ದ ಅಣ್ಣಾಜೀ ರಾಯರವರೂ ಬಹು ಮುದ್ದಾಗಿಯೂ ವಿಶದವಾಗಿಯೂ ಅಕ್ಷರಗಳನ್ನು ಬರೆಯುತ್ತಿದ್ದರಂತೆ. ರಂಗಾಚಾರ್ಯರ ಅನೇಕ ಕಾಗದಪತ್ರಗಳು ಇವರಿಬ್ಬರ ಬರೆವಣಿಗೆಯಲ್ಲಿವೆಯೆಂದು ಹೇಳುತ್ತಾರೆ.

**೨೪.** ರಂಗಾಚಾರ್ಯರು ವಿದ್ಯಾಭಿಮಾನಿಗಳಾದರೂ ಶುಷ್ಕ ಪಾಂಡಿತ್ಯದಲ್ಲಿ ಆದರಣೆಯುಳ್ಳವರಾಗಿರಲಿಲ್ಲ. ಅವರು ಶ್ರೀಮನ್ಮಹಾ ರಾಜರವರಿಗೆ ಉಪಾಧ್ಯಾಯರನ್ನು ಗೊತ್ತುಮಾಡಬೇಕಾಗಿದ್ದ ಸಂದರ್ಭ ದಲ್ಲಿ, ಒಬ್ಬ ಮೈಸೂರಿನ ತರುಣನು ಆಗತಾನೆ ಮದ್ರಾಸು ವಿಶ್ವವಿದ್ಯಾ ಪೀಠದ ಭಾರೀ ಪರೀಕ್ಷೆಗಳಲ್ಲಿ ತೇರ್ಗಡೆಹೊಂದಿ ಪಟ್ಟಾಂಚಿತ ನಾಗಿದ್ದುದು ಅವರ ಗಮನಕ್ಕೆ ಬಂದಿತು. ಆತನ ಉಪಯೋಗಿತೆಯನ್ನು ಕಂಡುಹಿಡಿಯಬೇಕೆಂಬ ಉದ್ದೇಶದಿಂದ ರಂಗಾಚಾರ್ಯರು, ಆತನು ಒಂದು ದಿನ ಸಭೆಯಲ್ಲಿ ಒಂದು ಉಪನ್ಯಾಸ ಕೊಡುವಂತೆ ಏರ್ಪಾಟು ಮಾಡಿಸಿ, ಆ ಸಭೆಯಲ್ಲಿ ತಾವೂ ಕುಳಿತಿದ್ದರಂತೆ. ಆ ಉಪನ್ಯಾಸಕನು ವಿದ್ಯಾಭ್ಯಾಸದ ವಿಷಯವಾಗಿ ದೊಡ್ಡ ಲೇಖನವೊಂದನ್ನು ಬರೆದಿದ್ದು ತಂದು, ಅಲ್ಲಿ ಓದಲುಪಕ್ರಮಿಸಿದನಂತೆ. ಮೊದಲು "ಎಡ್ಯುಕೇಷನ್" (ವಿದ್ಯಾಭ್ಯಾಸ) ಎಂಬ ಪದವನ್ನು ತೆಗೆದುಕೊಂಡು, ಅದರ ಮೂಲ ರೂಪವನ್ನು ಕೊಟ್ಟು, ಅದನ್ನು ಅಕ್ಷರಕ್ಷರವಾಗಿ ವಿಂಗಡಿಸಿ, ಅದರ ಅವಯವಾರ್ಥಗಳನ್ನು ವಿವರಿಸಿ, ಅದಕ್ಕೆಲ್ಲಾ ಇತರ ಗ್ರಂಥಗಳಿಂದ ಉದಾಹರಣೆಗಳನ್ನು ಹೇಳುತ್ತಾ, ನಮ್ಮ ಸಂಸ್ಕೃತ ಪಂಡಿತರು ವಾಕ್ಯಾರ್ಥಮಾಡುವ ರೀತಿಯಲ್ಲಿ ಹೊರಟರಂತೆ. ಒಂದು ಘಂಟೆ ಯಾದರೂ ಉಪನ್ಯಾಸದಲ್ಲಿ ಅರ್ಧವೂ ಮುಗಿದಿರಲಿಲ್ಲ. ಇದನ್ನು ಕಂಡು ರಂಗಾಚಾರ್ಯರು ಆತನಿಗೆ ಪುಸ್ತಕ ಪ್ರಜ್ಞೆಯು ಹೆಚ್ಚಾಗಿರುವು ದೆಂದೂ, ಲೌಕಿಕ ಪ್ರಜ್ಞೆಯು ಇನ್ನೂ ಬೆಳೆಯಬೇಕಾಗಿರುವುದೆಂದೂ ಗೊತ್ತುಮಾಡಿ, ಅಂಥವನಿಗೆ ಆಗ ರಾಜೋಪಾಧ್ಯಾಯತ್ವದ ಜವಾಬ್ದಾರಿ ಗಿಂತ ಕಛೇರಿಯೊಳಗಿನ ಕೆಲಸವು ತಕ್ಕುದೆಂದು ನಿಶ್ಚಯಿಸಿ, ಅಂಥಾ ಕೆಲಸಕ್ಕೇ ಆತನನ್ನು ನಿಯಮಿಸಿದರಂತೆ.

**೨೫.** ಶ್ರೀಮನ್ಮಹಾರಾಜರವರಿಗೆ (ಟ್ಯೂಟರ್) ಉಪಾಧ್ಯಾಯರಾಗಿ ತಮಗೆ ಸಹಾಯೋದ್ಯೋಗಿಗಳಾಗಿದ್ದ ಎ. ಜಯರಾಮರಾಯರವರನ್ನು ಅದಕ್ಕೆ ಹಿಂದೆ (ಸುಮಾರು ೧೮೭೦-೭೧ರಲ್ಲಿ) ಇಂಗ್ಲೆಂಡಿಗೆ ಕಳುಹಿಸುವುದರಲ್ಲಿ ಪ್ರೋತ್ಸಾಹ ಸಹಾಯಗಳನ್ನು ಕೊಟ್ಟಿದ್ದವರು ರಂಗಾಚಾರ್ಯರು. ಅವರು ಜಯರಾಮರಾಯರ ಯೋಗ್ಯತೆಯನ್ನು ಕಂಡುಕೊಂಡು, ಅವರಿಗೆ ಉತ್ತೇಜನಕೊಟ್ಟು, ಅವರಿಗೆ ಬೇಕಾದ ದ್ರವ್ಯೋಪಪತ್ತಿಯನ್ನು ಕಲ್ಪಿಸಲು ಮದ್ರಾಸು ಬೊಂಬಾಯಿಗಳಲ್ಲಿದ್ದ ತಮ್ಮ ಮಿತ್ರರಾದ ಒಬ್ಬರಿಬ್ಬರು ಸಾಹುಕಾರರಿಗೂ ಇತರ ಅನುಕೂಲಸ್ಥರಿಗೂ ಕಾಗದಗಳನ್ನು ಬರೆದಿದ್ದರು. ತಾವೂ ಶಕ್ತ್ಯನುಸಾರವಾಗಿ ಧನಸಹಾಯ ಮಾಡಿದರು.

**೨೬.** ರಂಗಾಚಾರ್ಯರು ವಿದ್ಯಾರ್ಥಿಗಳಿಗೆ ಸಂತೋಷದಿಂದ ಸಹಾಯಕೊಡುತ್ತಿದ್ದರು. ಪ್ರತಿಭಾವಂತರಲ್ಲಿ ಅವರಿಗೆ ವಿಶೇಷ ಪಕ್ಷಪಾತವಿತ್ತು. ಯಾವ ವಿದ್ಯೆ, ಅಥವಾ ಕುಶಲ ಕಲೆ, ಅಥವಾ ಕಸಬೇ ಆಗಲಿ—ಅದರಲ್ಲಿ ಯೋಗ್ಯತೆಯುಳ್ಳವರೂ, ಮೇಧಾಶಕ್ತಿಯುಳ್ಳವರೂ, ಉತ್ಸಾಹವುಳ್ಳವರೂ, ಹೊಸ ಹೊಸ ವಿಷಯಗಳನ್ನು ಕಂಡುಹಿಡಿಯಬಲ್ಲವರೂ ಎಲ್ಲೆಲ್ಲಿರುವರೆಂದು ಸರ್ವದಾ ಅವರು ಹುಡುಕಿ ನೋಡುತ್ತಲೇ ಇದ್ದರು.

**೨೭.** ರಂಗಾಚಾರ್ಯರ ಅಭಿಮಾನಕ್ಕೆ ಪಾತ್ರರಾಗಿ ಮುಂದಕ್ಕೆ ಬಂದವರು ಸರ್ ಕೆ. ಶೇಷಾದ್ರಯ್ಯರವರು, ತಂಬುಶೆಟ್ಟರವರು, ಜಯರಾಮರಾಯರು, ವಿಜಯೀಂದ್ರರಾಯರು, ರಾಮಕೃಷ್ಣರಾಯರು. ತಮ್ಮ ಸ್ವಂತ ಅನುಬಂಧಿಗಳಾರನ್ನೂ ಅವರು ಹೆಚ್ಚಾಗಿ ಹತ್ತಿರ ಸೇರಿಸಿಕೊಂಡಿರಲಿಲ್ಲ. ಅವರು ಗುಣಾಭಿಮಾನಿಗಳಾಗಿದ್ದವರೇ ಹೊರತು ಜಾತ್ಯಭಿಮಾನ ಮತಾಭಿಮಾನಗಳಿಂದ ನಡೆದವರಲ್ಲ.

**೨೮.** ಮೈಸೂರು ದೇಶೀಯರಾದ ತರುಣ ವಿದ್ಯಾರ್ಥಿಗಳು ಹೊರಕ್ಕೆ ಹೋಗಿ ಹೆಚ್ಚು ವಿದ್ಯಾರ್ಜನೆ ಮಾಡುವಂತೆ ಅವರಿಗೆ ಸಹಾಯವೇತನಗಳನ್ನು ಕಲ್ಪಿಸಲು ಮೊದಲು ಮಾಡಿದವರು ರಂಗಾಚಾರ್ಯರು. ನಮ್ಮ ವಿಶ್ವೇಶ್ವರಯ್ಯನವರು, ರಾಮಣ್ಣನವರು, ಶ್ರೀನಿವಾಸರಾ

ಯರು—ಮೊದಲಾದವರನೇಕರು ಮದರಾಸು, ಪೂನಾ, ಬೊಂಬಾಯಿ ಮೊದಲಾದ ಸ್ಥಳಗಳಿಗೆ ಹೋಗಿ, ವೈದ್ಯ, ಎಂಜಿನೀರಿಂಗ್ ಮೊದಲಾದ ವಿಜ್ಞಾನ ವಿದ್ಯೆಗಳನ್ನು ಕಲಿತುಕೊಂಡು, ದೊಡ್ಡ ದೊಡ್ಡ ಪದವಿಗಳಿಗೆ ಅರ್ಹರಾದುದು ರಂಗಾಚಾರ್ಯರು ಕಲ್ಪಿಸಿದ ವೇತನ ಪ್ರೋತ್ಸಾಹದ ದೆಸೆಯಿಂದ.

**೨೯.** ರಂಗಾಚಾರ್ಯರು ಸಮಾಜ ಸಂಸ್ಕಾರವಾದಿಗಳಾಗಿದ್ದರೆಂದು ಗ್ರಂಥದಲ್ಲಿ ಹೇಳಿದೆ. ಬಾಲಿಕೆಯರ ವಿವಾಹದ ವಯಸ್ಸನ್ನು ಹೆಚ್ಚಿಸಬೇಕೆಂಬುದೂ ಅವರ ಇಷ್ಟವಾಗಿತ್ತು. ಅವರ ಕಾಲದಲ್ಲಿ ಬಾಲ್ಯ ವಿವಾಹ ನಿಷೇಧದ ಕಾನೂನು ಮೈಸೂರಿನಲ್ಲಿ ಇರಲಿಲ್ಲ. ಅದು ಆದುದು ೧೮೯೪ರಲ್ಲಿ—ಸರ್ ಕೆ. ಶೇಷಾದ್ರಯ್ಯರವರ ಕಾಲದಲ್ಲಿ.

**೩೦.** ರಂಗಾಚಾರ್ಯರು ಮೈಸೂರಿಗೆ ಬರುವುದಕ್ಕೆ ಮುಂಚೆಯೇ ಇಂಡಿಯಾ ದೇಶದ ಬಹು ಭಾಗಗಳನ್ನು ನೋಡಿದ್ದರು. ತಮಿಳು ಸೀಮೆ, ತೆಲುಗು ಸೀಮೆ, ಮಲೆಯಾಳ, ಬಂಗಾಳ, ಬೊಂಬಾಯಿ—ಈ ಪ್ರಾಂತಗಳಲ್ಲೆಲ್ಲಾ ಅವರು ಸರಕಾರದ ಕೆಲಸದಮೇಲೆ ಸಂಚಾರವಾಡಿದ್ದು, ಅಲ್ಲಲ್ಲಿಯ ಜನರ ಬಾಳುಬದುಕುಗಳ ಬಗೆಯನ್ನೂ ನಡೆನುಡಿಗಳ ಬಗೆಯನ್ನೂ ತಿಳಿದುಕೊಂಡಿದ್ದರು.

**೩೧.** ರಂಗಾಚಾರ್ಯರು ಇಂಗ್ಲೆಂಡಿಗೆ ಹೋಗುವ ಉದ್ದೇಶವನ್ನೂ ಇಟ್ಟುಕೊಂಡಿದ್ದರು. ರಾಜ್ಯದ ಕಾರ್ಯಗಳು ತಕ್ಕಮಟ್ಟಿಗೆ ಸ್ಥಿರತಕ್ಕೆ ಬಂದಮೇಲೆ ತಮ್ಮ ಪ್ರಭುಗಳವರೊಡನೆ ಇಂಗ್ಲೆಂಡಿಗೆ ಹೋಗಿಬರಬೇಕೆಂಬ ಆಶೆಯು ಅವರಿಗೆ ಬಲವಾಗಿತ್ತು. ಇದನ್ನು ಅವರು ಬೌರಿಂಗ್, ಟೇಲರ್ ಮುಂತಾದ ಮಿತ್ರರಿಗೆ ಬರೆದ ಕಾಗದಗಳಲ್ಲಿ ಸೂಚಿಸಿರುವರು.

**೩೨.** ರಂಗಾಚಾರ್ಯರ ವಿಷಯದಲ್ಲಿ ಶ್ರೀಮನ್ಮಹಾರಾಜರವರಿಗೆ ಅತ್ಯಂತ ವಿಶ್ವಾಸದೊಡನೆ ಸ್ವಲ್ಪ ಹೆದರಿಕೆಯೂ ಸೇರಿತ್ತು. ರಂಗಾಚಾರ್ಯರು ವಾಸವಾಗಿದ್ದುದು ಬೆಂಗಳೂರಿನ "ಹೈ ಗ್ರೌಂಡ್" ಎಂಬ ಭಾಗದಲ್ಲಿರುವ "ಸತ್ಯಾಲಯ"ವೆಂಬ ಮನೆಯಲ್ಲಿ. ಅದರ ಮುಂದೆ ಉತ್ತರಕ್ಕೆ ತಿರುಗಿ ನಿಂತರೆ, ಎದುರಿಗೆ ಕೆಲವು ಗಜಗಳ ದೂರದಲ್ಲಿ ಅರಮನೆ

ಕಾಣುತ್ತದೆ. ಈ ಅರಮನೆಯಲ್ಲಿ ಮಹಾರಾಜರವರು ವಾಸವಾಗಿದ್ದಾಗ, ಮಧ್ಯಾಹ್ನ ರಂಗಾಚಾರ್ಯರು "ಸತ್ಯಾಲಯ"ದಿಂದ ಹೊರಡುವ ಸಂಗತಿಯನ್ನು ಒಡನೆಯೇ ತಮಗೆ ತಿಳಿಯಪಡಿಸುವುದಕ್ಕೋಸ್ಕರ, ಮಹಾರಾಜರವರು ಆಳುಗಳನ್ನು ಗೊತ್ತುಮಾಡಿದ್ದರಂತೆ. ಏತಕ್ಕೆಂದರೆ ಮಧ್ಯಾಹ್ನದ ಹೊತ್ತು ಮಹಾರಾಜರವರು ನಿದ್ರಿಸಕೂಡದೆಂಬುದು ರಂಗಾಚಾರ್ಯರ ಅಭಿಪ್ರಾಯವಾಗಿತ್ತು. ಒಂದುವೇಳೆ ತಾವೇನಾದರೂ ಸ್ವಲ್ಪ ವಿಶ್ರಮಿಸಿಕೊಂಡಿದ್ದುದು ತಿಳಿದರೆ, ಅದರಿಂದ ರಂಗಾಚಾರ್ಯರು ಅಸಮಾಧಾನಪಟ್ಟಾರೆಂದು ಮಹಾರಾಜರವರು ಬಗೆದು, ಹಾಗಾಗುವುದನ್ನು ತಪ್ಪಿಸಲು ಈ ಏರ್ಪಾಟುಮಾಡಿದ್ದರಂತೆ. ರಂಗಾಚಾರ್ಯರು ಉಡುಪು ಹಾಕಿಕೊಳ್ಳಲು ಹೊರಟಕೂಡಲೆ, "ಸತ್ಯಾಲಯ"ದ ಆಳೊಬ್ಬನು ಬೀದಿಗೆ ಬಂದು ಸ್ವಲ್ಪ ದೂರದಲ್ಲಿದ್ದ ಮತ್ತೊಬ್ಬ ಆಳಿಗೆ ಸನ್ನೆಮಾಡುವನು; ಅವನು ಅಲ್ಲಿಂದ ಮುಂದಕ್ಕೆ ಇನ್ನೊಬ್ಬನಿಗೆ ಸನ್ನೆಮಾಡುವನು; ಅವನು ಅರಮನೆಯ ಬಳಿಯ ಆಳಿಗೆ ಸನ್ನೆಮಾಡುವನು. ಈ ರೀತಿಯ ಸಂಕೇತದ ಪ್ರಯೋಗದಿಂದ ರಂಗಾಚಾರ್ಯರು ಬರುವ ಸುದ್ದಿಯು ಒಂದೆರಡು ಕ್ಷಣ ಮುಂಚಿತವಾಗಿಯೇ ಶ್ರೀಮನ್ಮಹಾರಾಜರವರಿಗೆ ಮುಟ್ಟುವುದು. ಒಡನೆಯೇ ಅವರು ಎಚ್ಚೆತ್ತು, ರಂಗಾಚಾರ್ಯರನ್ನೆದುರುಗೊಳ್ಳಲು ಸಿದ್ಧರಾಗುವರಂತೆ.

**೩೩.** ಶ್ರೀಮನ್ಮಹಾರಾಜರವರು ಚಿಕ್ಕವರಾಗಿದ್ದಾಗ ಸ್ವಂತವಾಗಿ "ಸಾರೋಟ್" ನಡೆಸಿಕೊಂಡು ವಾಯುವಿಹಾರಕ್ಕೋಸ್ಕರ ಸಂಚಾರ ಹೊರಟಾಗ, ರಂಗಾಚಾರ್ಯರು ಒಂದೊಂದು ಸಲ ಅವರ ಪಕ್ಕದಲ್ಲಿ ಕುಳಿತುಕೊಂಡಿದ್ದು, ದಾರಿಯಲ್ಲಿ ಕಂಡ ಸಾಮಾನ್ಯ ಜನದ ಜೀವನ ಸ್ಥಿತಿಯ ಕಡೆಗೆ ಮಹಾರಾಜರ ಗಮನವನ್ನು ಅಲ್ಲಲ್ಲಿ ತಿರುಗಿಸುತ್ತಾ, ಜನಸ್ತೋಮವು ಹೆಚ್ಚಾಗಿದ್ದ ದಾರಿಗಳಲ್ಲಿ ಗಾಡಿಯನ್ನು ವೇಗವಾಗಿ ಓಡಿಸುವುದರಿಂದ ಜನರಿಗೆ ಹೇಗೆ ತೊಂದರೆ ಅಪಾಯಗಳುಂಟಾಗುವುವೆಂಬುದನ್ನು ತೋರಿಸುತ್ತಾ ಇದ್ದರಂತೆ.

**೩೪.** ಶ್ರೀಮನ್ಮಹಾರಾಜರವರಿಗೆ ರಂಗಾಚಾರ್ಯರಲ್ಲಿ ಭಯವಿದ್ದಂತೆಯೇ ಮಮತೆಯೂ ಇತ್ತು. ಮಹಾರಾಜರವರು ೧೮೮೩

ನೆಯ ಇಸ್ವಿಯ ಸುಮಾರಿನಲ್ಲಿ ತಸ್ವೀರು (ಫೋಟೊಗ್ರಾಫ್) ತೆಗೆಯು ವುದನ್ನು ಕಲಿತುಕೊಳ್ಳುತ್ತಿದ್ದರಂತೆ. ಆ ವರ್ಷ ದಸರಾ ಮಹೋತ್ಸವ ಮುಗಿದ ಬಳಿಕ ಒಂದು ದಿನ ರಂಗಾಚಾರ್ಯರು ಜಗನ್ಮೋಹನ ಬಂಗಲೆಗೆ ಯಾವುದೋ ಒಂದು ಕೆಲಸದ ನಿಮಿತ್ತವಾಗಿ ಹೋಗಿದ್ದರಂತೆ. ಆಗ ಅವರು ಸಮಾಧಾನದಿಂದ ಇದ್ದುದನ್ನು ಮಹಾರಾಜರವರು ಕಂಡುಕೊಂಡು, ಅವರನ್ನು ತಸ್ವೀರಿಗೆ ಕೂತುಕೊಳ್ಳುವಂತೆ ಒಡಂ ಬಡಿಸಿ, ಒಂದು ಭಾವಚಿತ್ರವನ್ನು ತೆಗೆದರಂತೆ. ಅದರ ಪ್ರತಿ ಈಗಲೂ ಇದೆ. ಅಧರ ಪಡಿಯಚ್ಚೇ ಈ ಪುಸ್ತಕದಲ್ಲಿ ಕೊಟ್ಟಿರುವ ಮೊದಲನೆಯ ಚಿತ್ರ.

**೩೫.** ರಂಗಾಚಾರ್ಯರು "ದೀರ್ಘಕಾಲ, ಉದ್ದಾಮವಾದ ರೀತಿಯಲ್ಲಿ, ಶ್ರದ್ಧೆಯಿಂದ ಮಾಡಿದ ಸೇವೆ"ಯ ವಿಷಯದಲ್ಲಿ ಶ್ರೀಮನ್ಮಹಾರಾಜರವರು ತಮ್ಮ ಸಂತೃಪ್ತಿಯ ಸೂಚನೆಯಾಗಿ ಒಂದು ಲಕ್ಷ ರೂಪಾಯಿಗಳ ಪಾರಿತೋಷಿಕ ದ್ರವ್ಯವನ್ನು ರಂಗಾ ಚಾರ್ಯರ ಕುಟುಂಬಕ್ಕೆ ಸಲ್ಲಿಸತಕ್ಕುದೆಂದು (೧೮೮೫ನೆಯ ಫೆಬ್ರುವರಿ ೨೨ನೆಯ ತಾರೀಖಿನ ೭೧೪೯-೫೦/೪೮೬ನೆಯ ನಂಬರುಳ್ಳ ಹುಕು ಮಿನ ಪ್ರಕಾರ) ಅಪ್ಪಣೆ ಕೊಡಿಸಿದರು.

**೩೬.** ರಂಗಾಚಾರ್ಯರು ಅವಸಾನ ಕಾಲದಲ್ಲಿ, ತಮ್ಮ ತರು ವಾಯ ಮೈಸೂರಿನ ದಿವಾನ್ ಅಧಿಕಾರಕ್ಕೆ ಶೇಷಾದ್ರಯ್ಯರವರೇ ಅರ್ಹರೆಂದು, ಶ್ರೀಮನ್ಮಹಾರಾಜರವರಿಗೆ ಬರೆಯಿಸಿದ್ದರೆಂದು ಹೇಳಿಕೆ ಯುಂಟು. ಮತ್ತು ಅವರು ಶೇಷಾದ್ರಯ್ಯರವರಿಗೆ ಹಿತೋಪದೇಶ ಮಾಡುತ್ತಾ, ಅದರಲ್ಲಿ ಪ್ರಜಾಪ್ರತಿನಿಧಿ ಸಭೆಯ ಅಭಿವೃದ್ಧಿಯನ್ನು ಕುರಿತು ಬಹಳವಾಗಿ ಬಾರಿಬಾರಿಗೂ ಹೇಳಿಕೊಂಡರೆಂದೂ ಪ್ರವಾದ ವುಂಟು.

**೩೭.** ರಂಗಾಚಾರ್ಯರು ಪ್ರಜಾಪಕ್ಷೀಯರು, ರಾಜಕೀಯ ವಿಚಾರ ಚತುರರು ಮತ್ತು ಲೇಖನ ನಿಪುಣರು—ಎಂಬ ಖ್ಯಾತಿಯು ವಿಶಾಲವಾಗಿ ಹರಡಿತ್ತು. ಆದುದರಿಂದ ಮದ್ರಾಸು ಬೊಂಬಾಯಿ ಗಳಲ್ಲಿಯ ಪ್ರಜಾಪ್ರಮುಖರೂ, ಸಂಘ ಸಮಾಜಗಳವರೂ ಸರಕಾರಕ್ಕೆ

ಅರ್ಜಿ ಅಹವಾಲುಗಳನ್ನು ಬರೆದುಕೊಳ್ಳಬೇಕಾದ ಸಂದರ್ಭದಲ್ಲಿ, ಅವುಗಳ ಪ್ರತಿಯನ್ನು ತಯಾರಿಸಿಕೊಡುವ, ಅಥವಾ ತಿದ್ದಿ ಸರಿಪಡಿಸಿಕೊಡುವ, ಉಪಕಾರವನ್ನು ರಂಗಾಚಾರ್ಯರಿಂದ ಬಯಸುತ್ತಿದ್ದರು. ಅನೇಕರು ಸಲಹೆಗಳನ್ನು ಕೇಳುತ್ತಿದ್ದರು. ಕಾಂಗ್ರೆಸ್ ಮಹಾಸಭೆಗೆ ಮುಂಚೆ ದಕ್ಷಿಣ ದೇಶದಲ್ಲಿ ಜನಜಾಗೃತಿಯನ್ನುಂಟುಮಾಡಿ, ದೇಶೀಯರ ರಾಜಕೀಯ ಸೌಕರ್ಯಗಳನ್ನು ಹೆಚ್ಚುಪಡಿಸಲು ಪ್ರಯತ್ನಿಸುತ್ತಿದ್ದ "ಮದ್ರಾಸ್ ನೇಟಿವ್ ಅಸೋಸಿಯೇಷನ್" ಎಂಬ ದೇಶೀಯ ಸಂಘವು ಇಂಥಾವುಗಳ ಪೈಕಿ ಒಂದು ಪ್ರಸಿದ್ಧವಾದುದು. ರಂಗಾಚಾರ್ಯರು ಇಂಥವರಿಗೆಲ್ಲ ಮನಃಪೂರ್ವಕವಾಗಿ ಸಹಾಯಮಾಡುತ್ತಿದ್ದರು.

**೩೮.** ರಂಗಾಚಾರ್ಯರು ಸಾಮಾನ್ಯವಾಗಿ ಆರೋಗ್ಯಶಾಲಿಯಾಗಿಯೇ ಇದ್ದರು. ಅವರ ಕಡೆಯ ಕಾಯಿಲೆಯು ಅಜೀರ್ಣದಿಂದ ಹುಟ್ಟಿ, ಕೆಲವು ತಿಂಗಳುಗಳ ಕಾಲ ಸ್ವಲ್ಪ ಸ್ವಲ್ಪವಾಗಿ ಬೆಳೆದು, ಕಾಮಾಲೆಯ ಜಾತಿಗೆ ತಿರುಗಿ, ಹೊಟ್ಟೆಯಲ್ಲಿ ವ್ರಣವಾಗಿ ಪರಿಣಮಿಸಿತು. ಆಗಿನ ಒಂದು ಇಂಗ್ಲಿಷ್ ಪತ್ರಿಕೆಯು ಹೀಗೆ ಬರೆಯಿತು:—

"Up to the very day on which he left Bangalore, the 26th ultimo (December), he continued incessantly at work........It was inferred that exposure in the train had brought on catarrh of the bile ducts. For a week or so after his arrival (at Madras), too, Mr. Rangacharlu drove about a good deal; and this was not calculated to allay the incipient disease."—*Bangalore Post.*

ಅವರ ಕಾಯಿಲೆಗೆ ಅವರ ಮಿತಿಮೀರಿದ ಕಾರ್ಯಾತುರತೆ, ವಿಶ್ರಾಂತಿರಹಿತತೆಗಳೇ ಕಾರಣವೆಂದು ಆಗಿನವರೆಲ್ಲರೂ ಹೇಳುತ್ತಾರೆ. ಅವರು ಆಗಾಗ ಸ್ವಲ್ಪ ಸ್ವಲ್ಪ ಬಿಡುವಿಟ್ಟುಕೊಂಡು, ಸಮಾಧಾನ ಸುಖವನ್ನನುಭವಿಸಿದ್ದಿದ್ದರೆ, ಅವರ ವ್ಯಾಧಿಯು ಅಷ್ಟು ಪ್ರಬಲವಾಗಿದ್ದಿರದು.

**೩೯.** ಶ್ರೀಮನ್ಮಹಾರಾಜರವರು ರಂಗಾಚಾರ್ಯರಿಗೆ ಒಂದಾನೊಂದು ಕಾಗದದಲ್ಲಿ ಈ ರೀತಿ ಬರೆದಿದ್ದರು:—

*I am glad you are well and busily engaged. If you only avoid being worried by visitors constantly, but have fixed hours and days for them, then you will be able to finish the arrears with ease and*

*without fear of breaking down. If you seem to break down, it is entirely your own doing and no one will forgive you for it. I am sure when Sir James comes to Bangalore, he will give you a long sermon on this. I hope you won't treat it as you have done before. Your grey hair keeps me back from making any remarks, but I have entrusted the task to Sir James.*

ಈ ವಾಕ್ಯಗಳು ಶ್ರೀಮನ್ಮಹಾರಾಜರವರಿಗೆ ತಮ್ಮ ಪ್ರಧಾನಿಯ ವಿಷಯದಲ್ಲಿದ್ದ ವಾತ್ಸಲ್ಯವಿಶೇಷವನ್ನೂ, ರಂಗಾಚಾರ್ಯರಿಗೆ ತಮ್ಮ ಆರೋಗ್ಯ ವಿಶ್ರಾಂತಿಗಳ ವಿಷಯದಲ್ಲಿದ್ದ ನಿರ್ಲಕ್ಷ್ಯವನ್ನೂ ಚೆನ್ನಾಗಿ ಸೂಚಿಸುತ್ತವೆ.

**೪೦.** ರಂಗಾಚಾರ್ಯರ ಧರ್ಮಪತ್ನಿ ಅಲಮೇಲಮ್ಮನವರು ೧೯೨೩ನೆಯ ಇಸ್ವಿ ನೊವೆಂಬರ್ ೧೯ನೆಯ ತಾರೀಖಿನವರೆಗೂ (ರುಧಿರೋದ್ಗಾರಿ ಸಂವತ್ಸರ) ಜೀವಿಸಿದ್ದರು. ಮುಪ್ಪಿನಲ್ಲಿಯೂ ಅವರು ದೃಢಕಾಯರಾಗಿದ್ದುಕೊಂಡು ಓಡಾಡುತ್ತ, ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳುಗಳಿಂದ ಕೂಡಿದ ದೊಡ್ಡ ಕುಟುಂಬವನ್ನು ಆಳುತ್ತಿದ್ದರು. ಅವರನ್ನು ಮನೆಯಲ್ಲಿ ಅಮ್ಮಾಳಮ್ಮನವರೆಂದು ಕರೆಯುತ್ತಿದ್ದರು. ಈ ಗ್ರಂಥದಲ್ಲಿಯ ಅನೇಕ ಸಂಗತಿಗಳು ಅವರು ತಿಳುಹಿಸಿದುವು. ಅವರ ಸಹೋದರರೇ ಮದ್ರಾಸಿನ ಪ್ರಸಿದ್ಧ ನ್ಯಾಯವಿಚಾರ ಚತುರರಾದ ಸರ್ ವಿ. ಭಾಷ್ಯಂ ಅಯ್ಯಂಗಾರ್ಯರು. ಅಮ್ಮಾಳಮ್ಮನವರನ್ನು ದಿವಾನ್ ರಾಜ್ಯಧುರಂಧರ ಸರ್ ಕೆ. ಶೇಷಾದ್ರಿಯ್ಯರವರೂ, ದಿವಾನ್ ವಿ. ಪಿ. ಮಾಧವರಾಯರವರೂ, ದಿವಾನ್ ಪ್ರಧಾನಶಿರೋಮಣಿ ಆನಂದರಾಯರವರೂ, ಜಡ್ಜಿ ರಾವ್ ಬಹದ್ದೂರ್ ಎ. ರಂಗಸ್ವಾಮಯ್ಯಂಗಾರ್ಯರವರೂ ತಾಯಿಯಂತೆ ಕಂಡು ಮನ್ನಣೆ ಮಾಡುತ್ತಿದ್ದರು. ಇವರಲ್ಲಿ ಕೆಲವರು ರಂಗಾಚಾರ್ಯರ ಮನೆಯಲ್ಲಿ ಹುಡುಗರಂತೆ ಬಳಕೆಯಾಗಿದ್ದು ಶಿಕ್ಷಿತರಾಗಿ ಬೆಳೆದವರು. ಅವರು ದೊಡ್ಡ ದೊಡ್ಡ ಪದವಿಗಳಿಗೆ ಹತ್ತಿದಮೇಲೂ ಆಕೆಯ ಮುಪ್ಪಿನಲ್ಲಿ ಅವರ ಮನೆಗೆ ಹೋಗಿ, ಯೋಗಕ್ಷೇಮಗಳನ್ನು ವಿಚಾರಿಸಿ, ಮರ್ಯಾದೆ ತೋರಿಸಿ ಬರುತ್ತಿದ್ದರು.

